ಶ್ರೀಃ.

ಸನ್ಮಾನಗ್ರಂಥಾವಳಿ ಸಂಖ್ಯೆ ೨.

# ಪ್ರಜ್ಞಾಸ್ವಯಂವರಂ.



ಆವಿರ್ಭಾವಃ ಕಲಶಜಲಧಾವಧ್ವರೇವಾಪಿಯಸ್ಯಾ |
ಸ್ಥಾನಂ ಯಸ್ಯಾಸ್ಸರಸಿಜವನಂ ವಿಷ್ಣುವಕ್ಷಸ್ಥಲಂ ವಾ |
ಭೂಮಾಯಸ್ಯಾಭುವನಮಖಿಲಂ ದೇವಿ ದಿವ್ಯಂ ಪದಂ ವಾ |
ಸ್ತೋಕಪ್ರಜ್ಞೈರನವಧಿಗುಣಾ ಸ್ತೂಯಸೇ ಸಾ ಕಥಂ ತ್ವಮ್ ||

---

"ಸತೀಹಿತೈಷಿಣೀ" ಮಾತೃಮಂದಿರಂ,
ನಂಜನಗೂಡು.

## ಸತೀಹಿತೈಷಿಣೀಗ್ರಂಥಮಾಲಾ



ಗ್ರಂಥಾಲಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ.

| | | |
|---|---|---|
| ೬ | ದಕ್ಷಕನ್ಯಾ | ೧—೮—೦ |
| ೭ | ರಮಾನಂದ (ದ್ವಿತೀಯ ಮುದ್ರಣ) | ೦-೧೨—೦ |
| ೮ | ವಿಕ್ರಮ | ೧—೨—೦ |
| ೯ | ಚಂದ್ರವದನಾ | ೦-೧೦—೦ |
| ೧೦ | ಪೂರ್ಣಕಲಾ | ೧—೪—೦ |
| ೧೧ | ತಪತೀಕಲ್ಯಾಣ | ೦—೮—೦ |

ವಿ. ಸೂ:—ಶಾಶ್ವತಚಂದಾದಾರರಿಗೆ ಸುಲಭಕ್ರಯಕ್ಕೆ ದೊರೆಯು ವಲ್ಲದೆ, ಭದ್ರಗೀತಾವಲಿ ೪ ಆಣೆ, ಸೇವಾವಿಚಾರ-ವಿದ್ಯಾವಿಚಾರಗಳು ಬ ಮಾನವಾಗಿ ಲಭಿಸುವುವು.

ವಿಳಾಸ— ಕಾರ್ಯದರ್ಶಿ

ಹಿತೈಷಿಣೀ, ಮಾತೃಮಂದಿರಂ,

ನಂಜನಗೂಡು, (ಮೈಸೂರು

ಸತೀಹಿತೈಷಿಣೀ ಸನ್ಮಾನಗ್ರಂಥಮಾಲಾ ನಂ. ೨

ಶ್ರೀ

# ಪ್ರಜ್ಞಾಸ್ವಯಂವರಂ

ನಂಜನಗೂಡು.

ಸತೀಹಿತೈಷಿಣೀ ಮಾತೃಮಂದಿರದಲ್ಲಿ

ಪ್ರಕಟಿಸಲ್ಪಟ್ಟಿದು.

ಪ್ರಥಮಮುದ್ರಣ ೩೦೦, ಪ್ರತಿಗಳು.



ಬೆಂಗಳೂರು ಸಿಟಿ.

ದಿ. ಸಿಟಿಪ್ರೆಸಿನಲ್ಲಿ ಮುದ್ರಿತವಾಯಿತು.

೧೯೧೯

(ಇದರ ಸರ್ವಸ್ವಾತಂತ್ರ್ಯವೂ ಸಂಪಾದಿಕಿಯದಾಗಿರುವುದು.)

ಕ್ರಯ ೦-೮-೦




...ಭಾಂಡಾರ.

...ಂಗಳು.

# PRAGNASWAYAMVARAM

EDITED AND PUBLISHED

BY

**Srimati Tirumalamba**

8K2.6
TIR P

AT THE

**HITHISHINI MATRU MANDIRAM,**

**NANJANGUD.**

111226

First Edition 750 Copies.

Printed at the
THE CITY PRESS.
Fort Bangalore City.

1919

(*All Rights Reserved*) [PRICE 0-8-0

ಶ್ರೀಃ

ಶ್ರೀಅರವಿಂದನಾಯಕೀಸಮೇತ

ಶ್ರೀರಾಮಾಪ್ರಮೇಯಪ್ರಸನ್ನಃ



"ಶ್ರೀವತ್ಸ ಕೌಸ್ತುಭ ವಿರಾಜಿತ ದಿವ್ಯರೂಪ |
ವಿಶ್ವಂಭರೋದ್ಧರಣ ದರ್ಶಿತ ಭೂರಿಶೌರ್ಯ ||
ಪ್ರಹ್ಲಾದ ಭಕ್ತಿ ಭರಣಾಯ ಕೃತಾವತಾರ |
ಶ್ರೀಶಾಪ್ರಮೇಯ ಚರಣೌ ಶರಣಂ ಪ್ರಪದ್ಯೇ ||"

# ಸಮರ್ಪಣೆ.

---

ಆಪದ್ಬಾಂಧವನೂ ಇಷ್ಟದೇವನೂ ರಾಜೇಂದ್ರಪುರಾಧೀಶನೂ ಆದ

ಶ್ರೀರಾಮಾಪ್ರಮೇಯ ಸ್ವಾಮಿಯ

ಚರಣಾರವಿಂದದಲ್ಲಿ

ಪ್ರಜ್ಞಾಸ್ವಯಂವರವೆಂಬ

ಈ ಗ್ರಂಥವನ್ನು

ಅನನ್ಯ ಶರಣ್ಯಭಾವದಿಂದ

ಸಮರ್ಪಿಸುವೆನು.

[ಭಾನುವಾರ]

(ಗ್ರಂಥಕಾರ)

ಶ್ರೀ

# ಪ್ರಸ್ತಾವನೆ.

ಸುಹೃದರೆ:—

ಈ ಸನ್ಮಾನಗ್ರಂಥಾವಳಿಯ ಪ್ರಥಮ ಪುಸ್ತಕವಾದ ತಪತೀಕಲ್ಯಾಣದ ಪ್ರಸ್ತಾವನೆಯಲ್ಲಿಯೂ ಪ್ರಕಟನೆಯಂತೆಯೂ, ಗ್ರಂಥಾವಳಿಯ ದ್ವಿತೀಯ ಪುಷ್ಪವಾಗಿ ಶ್ಯಮಂತಕೋಪಾಖ್ಯಾನ (ಶ್ರೀಕೃಷ್ಣ ಕಲ್ಯಾಣಮಂಜರಿ) ವನ್ನು ಪ್ರಕಟಿಸಲು ಅವಕಾಶ ತಪ್ಪಿ ಆ ಸ್ಥಾನದಲ್ಲಿ ಈ ಪ್ರಜ್ಞಾಸ್ವಯಂವರವು ಪ್ರಕಟವಾಗುವಂತಾಯಿತು ನಾಲ್ಕನೆಯ ಸ್ಥಾನದಲ್ಲಿ ಮೇಲೆ ಹೇಳಿದ ಪುಸ್ತಕವು ಪ್ರಕಟವಾಗುವುದು.

ಈ ನಾಟಕವು ಸಂಪಾದಿಕೆಯರ ತೀರ್ಥರೂಪರಿಂದ ವಿರಚಿತವಾಗಿ ಈಗ ಸುಮಾರು ೨೧ ವರ್ಷಗಳಾಗಿರಬಹುದು. ಅಭಿನಯಕ್ಕೆ ಅನುಕೂಲವಾಗುರಂತೆ ಈ ನಾಟಕವು ಅತ್ಯಂತ ಸುಲಭವಾಕ್ಸರಣಿಯಲ್ಲಿ ರಚಿತವಾಗಿದ್ದಿತು. ಈಗ ಇದನ್ನು ಸಂದರ್ಭಾನುಸಾರವಾಗಿ ಪರಿಷ್ಕರಿಸಿ ಪ್ರಚುರಪಡಿಸಲಾಗಿದೆ. ಇದವಲ್ಲಿರುವ ಪ್ರತಿಯೊಂದು ಕಂದ, ಪದ, ಹಾಡುಗಳೂ ಅಭಿನಯಕ್ಕೆ ಕೂಡ ಸುಲಭವಾಗುವಂತೆ ಹೊಸಗನ್ನಡದ ಭಾಷೆಯಿಂದಲೇ ರಚಿತವಾಗಿರುವುದಲ್ಲದೆ, ಪಾಂಡಿತ್ಯಪ್ರಭೆಯನ್ನು ಪ್ರದರ್ಶಿಸುವ ಹಳಗನ್ನಡದ ಪ್ರೌಢಕವಿತೆಯವುಗಳಲ್ಲವೆಂದು ಇಲ್ಲಿ ಪ್ರತ್ಯೇಕವಾಗಿ ನಾವು ಹೇಳಬೇಕಾಗಿಲ್ಲ.

ಈ ಪ್ರಜ್ಞಾಸ್ವಯಂವರದ ದ್ವಿತೀಯಾಂಕದಲ್ಲಿರುವ ಡಂಭ, ಲೋಭ, ಕೃಷ್ಣೆಯರ ಅಕ್ರಮವ್ಯಾಪಾರವನ್ನು ಸಕೃದಾವೃತ್ತಿ ನೋಡುವುದರಿಂದಲೇ

ಆಗ್ರಹಯುಕ್ತರಾಗಿಯಾಗಲಿ, ವಿಕಲ್ಪಾರ್ಥಗಳನ್ನು ಕಲ್ಪಿಸುವರಾಗಿಯಾಗಲಿ ಆಗುವಂಥವರೂ ಇರಬಹುದು. ಆದರೆ, ಅವರಲ್ಲಿ ನಮ್ಮ ವಿಜ್ಞಾಪನೆಯಿಷ್ಟು ಡಂಭ, ಲೋಭದಿಂದಕೂಡಿದತೃಷ್ಣೆಯ ವ್ಯಾಪಾರವೇ ಕೇವಲಜಘನ್ಯವೆಂಬುದನ್ನು ನಿದರ್ಶಿಸುವ ಉದ್ದೇಶದಿಂದಲೇ ಈ ಪಾತ್ರಗಳು ಅಲ್ಲಿ ಪ್ರದರ್ಶಿತವಾಗಿರುವುವೆಂಬುದು ಸಂತೋಷ ಲೋಭರ ವಾಗ್ಯುದ್ಧ, ಸಂದರ್ಭವಿವರಣದಲ್ಲಿಯೂ, ಮತ್ತೆ ನಾಟಕಾಂತ್ಯದಲ್ಲಿ ಮಾಡಿರುವ ವಿವೇಚನೆಯಿಂದಲೂ ವ್ಯಕ್ತಪಡುವುದರಿಂದ, ಸಾವಧಾನವಾಗಿ ಪರಿಶೀಲಿಸಿ ಮಥಿತಾರ್ಥವನ್ನು ಗ್ರಹಿಸಬೇಕೇ ಹೊರತು ಪೂರ್ವಾಪರಸಂದರ್ಭಗಳನ್ನು ವಿಚಾರಮಾಡದೆ ಅಸಹನೆಯಿಂದ ಒಂದೆರಡು ವಿಚಾರವನ್ನು ಮಾತ್ರ ತೆಗೆದು ಆಕ್ಷೇಪಿಸುವುದು ಸರಿಯೆನಿಸಲಾರದು.

ಇನ್ನು "ಸನ್ಮಾನಗ್ರಂಥಾವಳಿ" ಎಂಬ ಹೆಸರಿನಿಂದ ಇಂತಹ ನಾಟಕಗಳನ್ನು ಪ್ರಕಾಶಪಡಿಸುವ ಉದ್ದೇಶವೇನು ? ಇದರಿಂದ ಸತಿಯರ ಹಿತಸಾಧನೆಯಾಗುವುದು ಹೇಗೆ ? ಕೇವಲ ಪಾಮರರಂಜನೆಯೇ ಪ್ರಯೋಜನವಾಗಿಯುಳ್ಳ ಈ ನಾಟಕಪ್ರಕಟನೆಯಿಂದ ವಾಙ್ಮಯಕ್ಕಾಗಲಿ, ಸಮಾಜಧರ್ಮಕ್ಕಾಗಲಿ, ಸ್ತ್ರೀಯರ ಹಿತಸಾಧನೆಗಾಗಲಿ ಹೇಗೆ ಸಹಕಾರಿಯಾಗವುದು? ಎಂಬೀತರದ ಆಕ್ಷೇಪಗಳು ಅನೇಕರಿಂದ ಹೊರಡಬಹುದು. ಅದಕ್ಕೆ ನಮ್ಮ ಉತ್ತರವಿಷ್ಟು. ಸತೀಹಿತೈಷಿಣಿಯ ಪುಸ್ತಕಗಳೆಲ್ಲವೂ ಸಾಧ್ಯವಾದಷ್ಟು ಮೇಲಿನ ನಿಯಮವನ್ನು ಅನುಸರಿಸಿಯೇ ಹೊರಡುವುವು. ಈ ಸನ್ಮಾನಗ್ರಂಥಾವಳಿಯಲ್ಲಿ ನಾಟಕಗಳನ್ನು ಮಾತ್ರವೇ ಪ್ರಕಟಿಸುವೆವೆಂದು ಸಂಕಲ್ಪಿಸಿಲ್ಲ. ವಾಚನಾಭಿರುಚಿಯನ್ನು ಹೆಚ್ಚಿಸುವ ಉದ್ದೇಶದಿಂದಲೂ ಇತರ ಬಂಧು ಭಗಿನಿಯರು, ಸಾಹಿತ್ಯ ಸೇವೆಯಲ್ಲಿ ತೋರುತ್ತಿರುವ ಶ್ರದ್ಧೆಗೆ ಅವರನ್ನು ಯಥೋಚಿತವಾಗಿ ಪ್ರೋತ್ಸಾಹಿಸಬೇಕೆಂಬ ಭಾವನೆಯಿಂದಲೂ ಈ ಸನ್ಮಾನಗ್ರಂಥಾವಳಿ ಎಂಬ ಹೆಸರಿನಿಂದ ಮತ್ತೊಂದು ಶಾಖೆಯನ್ನು ಏರ್ಪಡಿಸಲಾಯಿತು. ಇದರಲ್ಲಿ ನಾಟಕಗಳಲ್ಲದೆ, ಯಕ್ಷಗಾನ, ಉಪನ್ಯಾಸ, ಲೇಖನ, ಮತ್ತು ಇತರ ಐತಿಹಾಸಿಕಕಾದಂಬರಿಗಳೂ ಪ್ರಕಟವಾಗುವುವು.

ಈ ಗ್ರಂಥಾವಳಿಯಲ್ಲಿ ಮೊದಲನೆಯ ವರ್ಷದಲ್ಲಿ ನಾಲ್ಕು ನಾಟಕಗಳೂ ಒಂದು ಯಕ್ಷಗಾನ (ತಿಮ್ಮಪ್ಪದಾಸವಿರಚಿತವಾದ) ಭೀಮಪರಾಕ್ರಮವರ್ಣನೆ ಎಂಬ ಅಭಿದಾನವುಳ್ಳ ಬಕಹಿಡಂಬ ವಧೆ (ಲಾಕ್ಷಾಗೃಹದಹನ) ವಿರಾಟಪರ್ವ (ಉತ್ತರಗೋಗ್ರಹಣ,) ಈ ಮೂರು ಭಾಗಗಳನ್ನೊಳಕೊಂಡ ಯಕ್ಷಗಾನ ಗ್ರಂಥವೂ ಹೊರಡುವುದು.

ಭಗವತ್ಕೃಪೆಯಿಂದ ವಾಚಕರ ಪ್ರೋತ್ಸಾಹವು ಹೆಚ್ಚಿದಂತೆಲ್ಲ ಈ ಸನಾತನಗ್ರಂಥಾವಳಿಯು ಮಾಸಪುಸ್ತಕಾವಳಿಯಾಗಿ ನಂದಿನಿಯಲ್ಲಿ ಪ್ರಕಟಿಸಲು ಕಳುಹಲ್ಪಟ್ಟಿರುವ ಉತ್ತಮತರದ ಯಕ್ಷಗಾನ, ನಾಟಕ, ಐತಿಹಾಸಿಕ, ಸಾಮಾಜಿಕ ಕಾದಂಬರೀ ವಿಚಾರತರಂಗಗಳಿಂದೊಡಗೂಡಿದ ವ್ಯಾಖ್ಯಾನಗಳೂ ಕ್ರಮವಾಗಿ ಪ್ರಕಟವಾಗುವುವು. ಆದುದರಿಂದ ಈಗಿನ ಪ್ರಯತ್ನವನ್ನು ನಮ್ಮ ದೇಶವತ್ಸಲರಾದ ಬಂಧು ಭಗಿನಿಯರು ಸಹೃದಯರಾಗಿ ಪ್ರೋತ್ಸಾಹಿಸುವರೆಂದು ನಂಬಿ ನಮ್ಮೀ ಪ್ರಸ್ತಾವನೆಯನ್ನು ಇಷ್ಟಕ್ಕೆ ಸಮಾಪ್ತಿಗೊಳಿಸುವೆವು.

ಕಾಳಯುಕ್ತಿ ಸಂ॥ ಮಾರ್ಗಶಿರ ಬ॥ ⎫ ಇತಿ
ಏಕಾದಶಿ ಭಾನುವಾರ (೨೯-೧೨-೧೮) ⎬
ಮಾತೃಮಂದಿರಂ ನಂಜನಗೂಡು. ⎭ ಹಿತೈಷಣೀ

ಶ್ರೀಃ

ಶ್ರೀರಾಮಪ್ರಸನ್ನ.

# ಪ್ರಜ್ಞಾಸ್ವಯಂವರಂ.



## ಪ್ರಥಮಾಂಕ ಪ್ರಾರಂಭಃ

ಶ್ರೀರಾಮಂ ಶ್ರಿತಪಾರಿಜಾತಮಮಲಂ ಬ್ರಹ್ಮಾದಿ ಸಂಸೇವಿತಂ ।
ಶ್ರೀಮತ್ಕೌಶಿಕಯಜ್ಞಪಾಲನವಿಧೌ ಧುರ್ಯಂ ಕೃಪಾಸಾಗರಂ ॥
ಶ್ರೀಕಂಠಾಸಘಚಾಪಖಂಡನವಿಧೌ ಸಕ್ರೋಧಪಂಚಾನನಂ ।
ಶ್ರೀಸೀತಾಸುದತೀಶಿರೋಮಣಿಯುತಂ ಶ್ರೀರಾಮಚಂದ್ರಂ ಭಜೇ ॥

ರಾಗ ॥ ಕಮಾಚು ॥ ಚಾಪು ॥ (ಸೂರ್ಯನಾರಾಯಣ)

ಶ್ರೀನಿವಾಸನೇ ಪರಿಪಾಲಿಸೈ ॥ಪ॥ ಸದಯ ಹೃದಯ ಸಂತತ॥ಅ॥
ಸುರರಿಪುಕುಲಮಂ ಧುರದೊಳು ಸವರುತ।ಧರಣಿಯಭಾರಮಂ।
ಪರಿಹರಮಾಡಿದ ತೆರದಿಂದಲೆಮ್ಮನು ॥ ಶ್ರೀನಿವಾಸನೆ ॥ ೧ ॥
ಅರಿಷಡ್ವರ್ಗಮಂ । ಭರದಿಂಜಯಿಸುತ । ಹರಿಭಜಕನೆನಿಪ ।
ವರವನುಪಾಲಿಸೈ ಪರಮಕೃಪಾಕರ ॥ ಶ್ರೀನಿವಾಸನೆ ॥ ೨ ॥
ದುಷ್ಟವಿದಾರನೆ ಶಿಷ್ಟಸಂರಕ್ಷಣ । ಕೃಷ್ಣಮಹೀಶನಾಭೀಷ್ಟ
ವನೆಲ್ಲಮಂ ಕೊಟ್ಟುನೀಂರಕ್ಷಿಸೈ ॥ ಶ್ರೀನಿ ॥ ೩ ॥

(ನಾಂದ್ಯಂತೆ ಸೂತ್ರಧಾರಃ)

ಸೂತ್ರ—(ಮೇಲೆನೋಡಿ ಭಕ್ತಿಭಾವದಿಂದ ಕೈಜೋಡಿಸಿ)

ವೃತ್ತ ॥ ಶ್ರೀಕಾಂತಂ ಶ್ರಿತಪಾರಿಜಾತಮಮಲಬ್ರಹ್ಮೇಂದ್ರರಿಂ ಸೇವಿತಂ ।
ರಾಕಾಂತರ್ಗತ ಚಂದ್ರಕೋಟಿಸದೃಶಸ್ಮೇರಾನನಂ ಸುಂದರಂ ॥
ಲೋಕವ್ಯಾಪಕನಾಗಿ ಸಾತ್ವಿಕಗುಣವ್ಯಾಪಾರದಿಂವರ್ತಿಪಾ ।
ಭೂಕಾಂತಂ ಕಮಲಾಕ್ಷನೇ ಪೊರೆಯಲೀ ಶ್ರೀಕೃಷ್ಣಭೂಪಾಲನಂ ॥

( ಸಭೆಯನ್ನುನೋಡಿ ವಿನೀತನಾಗಿ )

ಸಹೃದಯರಾದ ಸಭಾಸದರಿಗೆ ವಂದಿಸುವೆನು. ಮಹನೀಯರಾದ ಇವರನ್ನು ಯಾವರೀತಿಯಿಂದ ಪ್ರಸನ್ನೀಕರಿಸಲಿ ? (ಕಿವಿಕೊಟ್ಟು ಕೇಳಿದಂತೆ ಅಭಿನಯಿಸಿ) ಏನು! ಏನೆಂದು ಆಜ್ಞಾಪಿಸಲ್ಪಟ್ಟೆನು ? ಹೀಗಲ್ಲವೆ ?—

ಕಂದ ॥ ಆವುದರೊಳ್ಸರಸವೊ ವಾ ।
ಕ್ಯಾವುದರೊಳ್ಸಂವಿಧಾನಮತಿಚತುರತರಮೊ ॥
ಆವುದುನವರೂಪಕಮೊ ।
ನೀವದನಾಡೀಗ ನಮ್ಮ ತುಷ್ಟಿಪುದಾರ್ಯರ್ ॥

( ಸಂತೋಷದಿಂದ )

ಕೃತಕೃತ್ಯನಾದೆನು. ಇರಲಿ, ನನ್ನ ಸಹಚಾರಿಣಿಯೊಡನೆ ಮುಂದಿನ ಸನ್ನಾಹದಲ್ಲಿ ಆಲೋಚಿಸುವೆನು.

( ತೆರೆಯಕಡೆನೋಡಿ )

ಕಂದ ॥ ರಮಣೀಕುಲಮಣಿತರುಣೀ ।
ಸುಮಧುರವಾಣಿ ಫಣಿವೇಣಿ ಪಲ್ಲವಪಾಣೀ ॥
ಸುಮಶರಸರಗಿಣಿ ಭಾಮಿನಿ ।
ಮಮಚಿತ್ತಾಕರ್ಷಿಣಿ ನಲಿಯುತೆ ಬಾ ಸಖಿನೀಂ ॥

( ನಟಿಯಪ್ರವೇಶ )

ನಟಿ—ಆರ್ಯಪುತ್ರನೆ ! ಕರೆದುದೇಕೆ ?

ಸೂತ್ರ—ಆರ್ಯೆ! ಚಿಂತಾಸಕ್ತಳಾಗಿರುವಂತೆ ತೋರುವೆ, ಕಾರಣವೇನು?

ನಟಿ— ಆರ್ಯಪುತ್ರನೆ ! ನಮ್ಮ ಅಭಿಮಾನಪಾತ್ರರಾದ ಕಲಹಂಸನಿಗೂ ಕಮಲಿನಿಗೂ ನಡೆಯಬೇಕಾಗಿರುವ ವಿವಾಹಕ್ಕೆ ಮಹಾಮಾಯನು ವಿಘ್ನ ಮಾಡುವನೆಂದು ಕೇಳಿ ಚಿಂತಿಸುವೆನು.

ಸೂತ್ರ—ಆರ್ಯೆ ! ದೈವಯೋಗದಿಂದಲೇ ಅವರಿಗೆ ಪರಸ್ಪರ ಅಂತಹ ಪ್ರೀತಿಯುಂಟಾಗಿರುವುದರಿಂದ ಮಹಾಮಾಯನ ಪ್ರಯತ್ನವುಕೂಡ ನಮಗೆ ಅನುಕೂಲವೇ ಆಗುವುದು. ಅದಕ್ಕೇಕೆ ಚಿಂತೆ ? ಇತ್ತಸೋಡು.—

ಕಂದ || ಸರಸಿಜಮುಖಿ ಸಭಿಕರಿವರ್ |
ವರಗಾಂಧರ್ವಾದಿ ಶಾಸ್ತ್ರಪರಿಣತರುಂಮೇಣ್ ||
ಹರಿಶರಣರುಮಂತಲ್ಲದೆ |
ಸರಸಿಗಳೊಳ್ ರಸಿಕರೆಂಬಪೆಸರಾಂತಿರ್ಪರ್ ||

ನಟಿ—ಆರ್ಯಪುತ್ರನೆ ! ನಮ್ಮ ಪುಣ್ಯೋದಯದಿಂದಲೇ ಈ ಮಹಾತ್ಮರ ಸಂದರ್ಶನ-ಸಂಭಾಷಣಾದಿಗಳು ಲಭಿಸಿರುವುವು. ಇಂತಹ ಸುದಿನವನ್ನು ನಾವು ಚಿರಸ್ಮರಣೀಯವಾಗಿ ಮಾಡಿಕೊಳ್ಳುವುದು ಆಗತ್ಯವು.

ಸೂತ್ರ—ಅದೇ ಉದ್ದೇಶದಿಂದಲೇ ನಿನ್ನನ್ನು ಕರೆದುದು.

ನಟಿ—ಮಾಡತಕ್ಕುದನ್ನು ನಿರೂಪಿಸಬಹುದಲ್ಲವೆ ?

ಸೂತ್ರ—ಆರ್ಯೆ ! ಇವರ ಸುಪ್ರಸನ್ನತೆಯನ್ನು ಪಡೆಯುವ ಉಪಾಯವೇನೆಂದು ಚಿಂತಿಸುತ್ತಿದ್ದ ನನಗೆ ಇವರು ಹೀಗೆ ಅಜ್ಞಾಪಿಸಿರುವರು.

ಕಂದ || " ಆವುದರೊಳ್ ಸರಸಮೊವಾಕ್ಯಾವುದು " ( ಎಂಬ ಪದ್ಯವನ್ನು ಹೇಳುವನು.)

ನಟಿ—ಆರ್ಯಪುತ್ರನೆ! ಗದಪುರೀನಿವಾಸಿ, ವೆಂಕಟಕೃಷ್ಣಾರ್ಯ ವಿ
ಚಿತವಾದ ಪ್ರಜ್ಞಾಸ್ವಯಂವರವು ಮೇಲೆಹೇಳಿದ ಎಲ್ಲಾ ಗುಣಗಳುಳ್ಳದಲ್ಲವೆ?

ಸೂತ್ರ—ಆರ್ಯೆ! ಚನ್ನಾಗಿ ಜ್ಞಾಪಿಸಿದೆ!

ಕಂದ|| ಪ್ರಾಜ್ಞರೊಳುತ್ತಮನೆನಿಸಿದ |
ಸುಜ್ಞಶ್ರೀ ವಿಷ್ಣುಭಕ್ತವರನಂ ನಲವಿಂ ||
ಪ್ರಜ್ಞಾಮಣಿವರಿಸಿದುದಂ |

(ತೆರೆಯಲ್ಲಿ) ಎಲೆ ಮೂರ್ಖನೆ! ನಾನು ಬದ್ಧಕಂಕಣನಾಗಿರಲು |

ನಟಿ—(ಭಯದಿಂದ) ಆರ್ಯಪುತ್ರನೆ! ರಕ್ಷಿಸು! ರಕ್ಷಿಸು!!

ಸೂತ್ರ—ಆರ್ಯೆ! ಭಯಪಡುವುದೇಕೆ?

ನಟಿ—ಆರ್ಯಪುತ್ರನೆ! ನಿನ್ನವಾಕ್ಯದಿಂದ ಆರೋ ಕುಪಿತರಾಗಿರುವರು.

ಸೂತ್ರ—ಆರೆಂಬುದನ್ನು ತಿಳಿವೆನು, ತಾಳು.

ಕಂದ || ಪ್ರಾಜ್ಞರೊಳುತ್ತಮನೆನಿಸಿದ |
ಸುಜ್ಞಶ್ರೀವಿಷ್ಣುಭಕ್ತವರನಂ ನಲವಿಂ ||
ಪ್ರಜ್ಞಾಮಣಿವರಿಸಿದುದಂ |
ಪ್ರಜ್ಞಾಸ್ವಯಂವರಮೆಂದುಸಿರ್ವರ್ ರಸಿಕರ್ ||

ತೆರೆಯಲ್ಲಿ (ನೊದಲಿಸಂತೆಯೇ) ಮೂರ್ಖನೆ! ನಾನು ಬದ್ಧಕಂಕಣನಾ
ಗಿರಲು ಪ್ರಜ್ಞೆಯು ವಿಷ್ಣುಭಕ್ತನನ್ನು ವರಿಸುವಳೆ?

ಸೂತ್ರ—ಆರ್ಯೆ! ಈ ಧ್ವನಿಯು, ದುರ್ಜಯನಾದ ಕಾಮನದೇ
ಸರಿ! ಕಾಮನು ರತಿಯೊಡನೆ ಇತ್ತ ಬರುವಂತಿದೆ; ನಡೆ, ನಾವು ಮುಂದಿನ
ಪಾತ್ರವಂ ಸಿದ್ಧಪಡಿಸುವ.

ನಟಿ—ಆಗಬಹುದು. (ಇಬ್ಬರೂ ಹೊರಡುವರು)

## ಇದು ಪ್ರಸ್ತಾವನೆ

(ರತಿಯೊಡನೆ ಕಾಮನ ಪ್ರವೇಶ)

ಕಾಮ—ಪ್ರಿಯೆ ! ನಮ್ಮ ಮಹಾರಾಜನಾದ ಮಹಾಮೋಹನಿಂದ ನಾನು ಆಜ್ಞಾಪಿಸಲ್ಪಟ್ಟು ಬಂದಿರುವೆನು.

ರತಿ—ಏನೆಂದು ?

ಕಾಮ— " ಜನಕವಂಶಸಂಭೂತೆಯಾದಪ್ರಜ್ಞೆಯು, ಸೂರ್ಯವಂಶಸಂಭವನಾದ ವಿಷ್ಣುಭಕ್ತನನ್ನು ವರಿಸುವಳೆಂದುತಿಳಿದಿರುವೆನು, ಅವರ ದಾಂಪತ್ಯವು ನನಗೆ ದುಃಖಕರವಾಗಿರುವುದರಿಂದ ನೀವು ಅವರನ್ನು ಸೇರಿಸದಂತೆ ನೋಡಿಕೊಳ್ಳತಕ್ಕದು. " ಹೀಗೆ ಆಜ್ಞೆಯಾಗಿರುವುದು.

ರತಿ—ಆರ್ಯಪುತ್ರ ! ಪ್ರಯತ್ನವು ದುಸ್ತರವಾದುದು. ಪ್ರಜ್ಞೆಯು ವಿಷ್ಣುಭಕ್ತನನ್ನುಬಿಟ್ಟು ಮತ್ತಾರನ್ನೂ ವರಿಸುವಳಲ್ಲ !

ಕಾಮ —(ದರ್ಪದಿಂದ ನಕ್ಕು) ಪ್ರಿಯೆ ! ವಿಶೇಷವಾದ ಸಲಿಗೆಯಿಂದ ನಿನಗೆ ನನ್ನ ಮಹಾತ್ಮ್ಯೆ ಗೊತ್ತಿಲ್ಲ, ಹೇಳುತ್ತೇನೆ ಕೇಳು.

ರಾಗಾ || ದಬಾ. ರ್ (ದಾರಿತೋರಿಸುಮುನಿ)

ಕೇಳುಪ್ರಿಯೆ ಯನ್ನಸಾಹಸಮಂ ನೀಂ ||ಪ|| ಕೇಣದಿಂ ಬರುತಿಹ ಜಾಣರಗುಂಪನು । ಬಾಣವಹೊಡೆಯುತೆ ತ್ರಾಣಕೆಡಿಸುವೆನಾಂ || ೧ || ಚೆಂದದಿಚಲಿಸುವ ಮಂದಮಾರುತನಿಂದ । ಅಂದದಿಂಸೇರುತೆನಾಂ ಬಂಧಗೊಳಿಪೆಜಗಮಂ || ಕೇಳುಪ್ರಿಯೆ ||೨ || ಶಾರದೇಂದುವಿನೊಳ್ಸೇರಿ । ನಾರಸಾಪ್ತಿಯರಕೂಡಿ। ಕ್ರೂರಶರವನುಬೀರಿ । ಸೂರೆಗೊಳ್ಳುವೆ ಜಗವಂ || ಕೇಳುಪ್ರಿಯೆ||೩||

ಪ್ರಿಯೆ ! ಇಷ್ಟೇಅಲ್ಲ, ಇತರ ಪರಿಮಳವಸ್ತುಗಳಲ್ಲಿಯೂ ಕೋಮಲ ವಸ್ತುಗಳಲ್ಲಿಯೂ ನಾನಿದ್ದು, ಸ್ತ್ರೀಪುರುಷರಮನಸ್ಸನ್ನು ವಿಕಾರವಶವಾಗ

ಮಾಡುವೆನು. ನನ್ನೀಸಾಹಸ-ಪರಾಕ್ರಮಗಳಿಂದ ಇಂದ್ರ, ಚಂದ್ರ, ಚಂದ್ರ ಮೌಳಿಗಳೇ ಮೊದಲಾದವರುಕೂಡ ಜಿತರಾಗಿರುವರು. ಇನ್ನು ವಿಷ್ಣು ಭಕ್ತನ ಪಾಡೇನು ?

ರತಿ—ಆರ್ಯಪುತ್ರನೆ ! ಇಂತಹ ಅಸೀಮಪಾಂಡಿತ್ಯವೂ ಅದ್ಭುತಶಕ್ತಿ ಯೂ ನಿನ್ನಲ್ಲಿರುವುದರಿಂದಲೇ ನೀನು ಅಜೇಯನೆಂದೂ ದುರ್ಜೇಯನೆಂದೂ ಜಗಜ್ಜೇತನೆಂದೂ ಪ್ರಖ್ಯಾತಿಪಡೆದಿರುವೆ. ಹಾಗಿಲ್ಲದಿದ್ದರೆ, ನಿಶ್ಚಲಚಿತ್ತದಿಂದ ಉಗ್ರವಾದ ತಪಸ್ಸಿನಲ್ಲಿದ್ದ ಶಿವನನ್ನು ಕ್ಷಣಮಾತ್ರದಲ್ಲಿ ವಿಕಾರವಶನಾಗಿ, ಅರ್ಧ ನಾರೀಶ್ವರನೆಂಬ ಪ್ರಸಿದ್ಧಿಗೆ ಬರುವಂತೆ ಆತನನ್ನು ದಾಕ್ಷಾಯಣಿಯ ದಾಸನಾ ಗುವಂತೆ ಮಾಡುತ್ತಿದ್ದೆಯಾ ? ಆದರೂ, ಪ್ರಜ್ಞೆಯ ವಿಷಯದಲ್ಲಿ ನಿನ್ನೀ ಪ್ರಯತ್ನವೆಲ್ಲವೂ ವಿಷ್ಣುಭಕ್ತನ ಪರಿಣಯಕ್ಕೆ ಅನುಕೂಲವಾಗಬಹುದೆಂದು ತೋರುವುದು.

ಕಾಮ—(ಗರ್ವದಿಂದ)

ರಾಗಾ ‖ ( ಏಮಿಮಾಯಮು ಜೇಸಿವೋತಿವೋ )

ನಾರೀಮಣಿಯೆ ಕೇಳ್ವುದೆನ್ನ ಘೋರವಿಕ್ರಮಂ ‖ ಪ ‖
ಧೀರನಾದೆನೆಗೆ ಮೂರುಲೋಕವೆದುರೆಪೇಳ್' ‖ ಅ ‖
ಈಶನನ್ನು ಪಾಶದಿಂದ ಕಟ್ಟಿಕೆಡಹಿದೆ | ಜಗಧೀಶನಿದುರೆ ಮುನಿ
ಗಳೆದುರೆಯನಗೆ ಯಾರ್ಸಮರ್ ‖ ೧ ‖

ಪ್ರಿಯೆ ! ನಿಜವಾಗಿ ವಿಷ್ಣುಭಕ್ತನು ಜೀವಿಸಿದ್ದರಲ್ಲವೇ—ಪ್ರಜ್ಞೆಗೆ ಅವನ ಪರಿಣಯವಾಗುವುದು ? ಅವನನ್ನು ಅರಣ್ಯಪ್ರಾಪ್ತನಾಗಿ ಮಾಡಲು ನಮ್ಮ ಮಹಾರಾಜನು ನನಗಿಂತಲೂ ಸಾಹಸಿಗಳಾದ ದಂಭಾದಿಗಳನ್ನೂ ಮೊದಲೇ ಕಳುಹಿರುವನು. ಅವರು ಕಾರ್ಯವನ್ನು ಸಾಧಿಸಿಯೇ ಇರಬಹುದು.

(ತೆರೆಯಲ್ಲಿ)

" ಆಹಾ ! ಪ್ರಜ್ಞೆಯನ್ನು ಸಂತೈಸುವುದು ಕಷ್ಟ ! ಅತಿಕಷ್ಟ !! "

ಕಾಮ—(ಸಂಭ್ರಮದಿಂದ) ಪ್ರಿಯೆ ! ವಿವೇಕನು, ಸುಶೀಲೆಯೊಡನೆ ಬರುವನು. ಇನ್ನು ನಾವು ಇಲ್ಲಿರುವುದು ಸರಿಯಲ್ಲ. (ಇಬ್ಬರೂ ಹೋಗುವರು.)

**ಸುಶೀಲೆಯ ಅಂತಃಪುರ**

(ಸುಶೀಲೆಯೊಡನೆ ವಿವೇಕನ ಪ್ರವೇಶ)

ವಿವೇಕ—(ಮೇಲೆನೋಡಿ ಕೈಜೋಡಿಸಿ)

ರಾಗಾ|| ಜುಂಜೋಟಿ | (ಶಿಕರೀಮಹಾಬಲಾ)

**ಪಾಹಿಶ್ರೀನಿವಾಸನೆ । ದೇಹಿಮುದಂ ನಿರಂತರಂ || ಪ ||**
**ಮೋಹಪಾಶವಾರಣಸನ್ಮೋಹನಾಕಾರಶ್ರೀಧರ ||ಪಾಹಿ|| ಮಾನಿ**
**ನೀಮಣಿಯುನಿಂದು । ದೈನ್ಯದಿಂದ ಕೂಗಲಂದು | ಮಾನದಿಂದ**
**ಕಾಯ್ದಬಂಧು । ಶ್ರೀನಿವಾಸದಯಾಸಿಂಧು || ಪಾಹಿ || ೧ ||**
**ಇಂದ್ರಸಂಗಕಲುಷಿತೆಯಾದ | ಸುಂದರೀಯಹಲ್ಯೆಯಾ । ಸಂ**
**ದಶಾಪದಿಂದಬಿಡಿಸಿ ಆನಂದವಿತ್ತುಪೊರೆದ ವರದಾ || ಪಾಹಿ || ೨ ||**

ಸುಶೀಲೆ—ರಾಜೇಂದ್ರ ! ಹೀಗೇಕೆ ಕಳೆಗುಂದಿರುವಿರಿ ?

ವಿವೇಕ—ದೇವಿ ! ನಮ್ಮ ಪ್ರಜ್ಞೆಯು ವರಿಸಿದ ವಿಷ್ಣುಭಕ್ತನನ್ನು ಪರ ಪಕ್ಷದವರು ದೇಶಭ್ರಷ್ಟನನ್ನಾಗಿ ಮಾಡಲು ಪ್ರಯತ್ನಿಸುತ್ತಿರುವಂತೆ ಕೇಳಿದ ನನ್ನಮನಸ್ಸು ಅತ್ಯಂತ ಖಿನ್ನವಾಗಿರುವುದು !

ಸುಶೀಲೆ—ಆರ್ಯಪುತ್ರನೆ ! ಚಿಂತಿಸುವುದರಿಂದ ಕಾರ್ಯಸಿದ್ಧಿಯಾಗುವುದಿಲ್ಲ ಸುಕುಮಾರಿಯು ತನ್ನ ಅಂತಃಪುರದಲ್ಲಿ ನಿದ್ರಾವಶಳಾಗಿದ್ದವೇಳೆ, ವಿಷ್ಣುಭಕ್ತನೇಬಂದು ಅವಳ ಪಾಣಿಗ್ರಹಣಮಾಡಿದಹಾಗೆ ಕನಸು ಕಂಡ ಳಂತೆ ! ಅದುಮೊದಲು.

ಕಂದ || ಕನಸಂ ಕಂಡದು ಮೊದಲಿಂ |
ಮನದೊಳ್ ಧ್ಯಾನಿಸುತೆ ವಿಷ್ಣುಭಕ್ತಸರೂಪಂ ||
ತನುಜಾತೆ ಜಪಿಸುತಿರುವಳು |
ಘನಮಂತ್ರದೊಳಾ ಪ್ರಿಯಕರನಾಮವನೊಲವಿಂ ||

ವಿವೇಕ—ದೇವಿ! ಆಶ್ಚರ್ಯವೇನಿದು! ಅಂತಃಪುರದಲ್ಲಿ ವಾಸಿಸುವ ಪ್ರಜ್ಞೆಗೆ ಈರೀತಿಯಾಗಬೇಕಾದರೆ ದೈವೇಚ್ಛೆಯೋ-ಇತರರ ಮಾಯೆಯೋ- ಊಹಿಸಲಸಾಧ್ಯ!

ಸುಶೀಲೆ—ಆರ್ಯಪುತ್ರನೆ! ಸಕಲ ಮಂತ್ರಗಳಿಗೆ ಆಶ್ರಯಳಾಗಿಯೂ ಸಮಸ್ತ ಯೋಗಗಳಿಗೆ ನೆಲೆಯಾಗಿಯೂ ಇರುವ ಪ್ರಜ್ಞೆಯಲ್ಲಿ ಇತರರ ಕೌಟಿಲ್ಯವು ಫಲಿಸುವುದೆ?

ವಿವೇಕ—ದೇವಿ! ನಿನ್ನ ವಾಕ್ಯವು ಸತ್ಯವಾದುದು. ಇಂತಹ ಲೋಕೋತ್ತರ ಗುಣಗಳುಳ್ಳವಳಾಗಿರುವುದರಿಂದಲೇ ಪ್ರಜ್ಞೆಯು ನಮ್ಮಿಬ್ಬರ ಪ್ರೀತಿಗೂ ಪಾತ್ರಳಾಗಿರುವಳು. ಆದರೂ ಈಗ ನಾವು ಮೂವರೂ ಸಂತಾಪಪಡುವ ಕಾಲವು ಪ್ರಾಪ್ತವಾಗಿದೆಯಲ್ಲಾ! ಹಾ! ಕಷ್ಟ! ಕಷ್ಟ!!

ಸುಶೀಲೆ— ರಾಗ—ಶಹನ || ಆದಿತಾಳ ||

ಯಾಕೆ ಚಿಂತಿಸೆ ಭೂಪ | ಶೋಕವಂ ಬಿಡು ಬಿಡು ||ಪ|| ಲೋಕರಕ್ಷಕನಾದ ಶ್ರೀಕಾಂತನಿರುತಿರೆ ||ಅನು|| ಜನಪಾತೆಯ ನೆಕೇಳಿ | ಘನಮುನಿಮನಧ್ಯೇಯನ | ವನುಬಿಡುವುದುಚಿತವೆ | ವನಜಾಕ್ಷನಿಲ್ಲವೆ ||ಯಾಕೆ||೧|| ದುಷ್ಟಕಾರ್ಯದೊಳಿಹ | ಭ್ರಷ್ಟಸಂಭಾವಿಗಳಂ | ಕೃಷ್ಣನೇ ನಿಗ್ರಹಿಸಿ | ಶಿಷ್ಟರಪೊರೆವನು ||ಯಾಕೆ||೨||

ವಿವೇಕ—ದೇವಿ ! ಕ್ಷಣಕ್ಷಣಕ್ಕೂ ಹೆಚ್ಚಾಗುತ್ತಿರುವ ಪ್ರತಿಪಕ್ಷದ ವರ ಹಾವಳಿಯನ್ನು ಕೇಳಿಕೇಳಿ ಮನಸ್ಸು ತಲ್ಲಣಿಸುವುದು; ಮುಂದೋರ ದಿರುವುದು. ಈ ಸಮಯದಲ್ಲಿ ನಿನ್ನ ಸಮಯೋಚಿತವಾದ ಹಿತಸೂಚನೆಯೊಂದೇ ಶಕ್ತಿಯನ್ನುಂಟುಮಾಡಬೇಕು.

ಸುಶೀಲೆ—ಆರ್ಯಪುತ್ರನೆ ! ಭಗವಂತನು ಭಕ್ತರ ಮನಸ್ಸನ್ನು ಪರೀಕ್ಷಿಸುವ ಉದ್ದೇಶದಿಂದಲೇ ಅವರಿಗೆ ಹಲವು ಪ್ರತಿಬಂಧಕಗಳನ್ನುಂಟುಮಾಡಿ ನೋಡುವನು. ಸ್ಥಿರಮನಸ್ಸಿನಿಂದಲೂ ಸಾಹಸದಿಂದಲೂ ಭಗವಂತನಲ್ಲಿ ಅಚಂಚಲವಾದ ಭರವಸೆಯಿಂದಲೂ ನಾವು ಅಂತಹ ಪ್ರತಿಬಂಧಕವನ್ನು ಪರಿಹರಿಸಿಕೊಳ್ಳುವ ಪ್ರಯತ್ನಮಾಡಬೇಕು. ಆದುದರಿಂದ ಈ ವೇಳೆಯಲ್ಲಿ ಅಧೈರ್ಯಪಡದೆ ಪ್ರತಿ ಪಕ್ಷದವರ ನಿಗ್ರಹೋಪಾಯವನ್ನು ಆಲೋಚಿಸಬೇಕು.

ವಿವೇಕ—ದೇವಿ ! ನೀನು ಹೇಳುವುದು ವಿಹಿತವೇಸರಿ. ಪ್ರಕೃತದಲ್ಲಿ ನಮ್ಮ ಪ್ರತಿಪಕ್ಷದವರಿಗೆ ಇರುವಷ್ಟು ಶಕ್ತಿ ನಮಗಿಲ್ಲವೆಂದು ಚಿಂತಿಸಬೇಕಾಗಿರುವುದು.

ಸುಶೀಲೆ—ಆರ್ಯಪುತ್ರನೆ! ಪ್ರತಿಪಕ್ಷದವರು ಕಾಲಬಲದಿಂದ ಪ್ರಬಲರಾಗಿದ್ದರೂ ದೈವಬಲವುಳ್ಳ ನನ್ನುವನ್ನು ಅವರು ಅತಿಕ್ರಮಿಸಲಾರರು. ವಿಜಯಲಕ್ಷ್ಮಿ ನಮ್ಮವರನ್ನೇ ವರಿಸುವಳೆಂಬುದು ನಿಜವಾದ ಮಾತು !

ವಿವೇಕ—ದೇವಿ! ತಪಸ್ವಿನಿಯಾದ ನಿನ್ನ ವಾಕ್ಯವು ಅನೃತವಾಗದೆಂದು ನಂಬುವೆನು. ಇನ್ನು ನಮ್ಮ ಶಾಂತಾದಿ ಸಚಿವರನ್ನು ನೇಮಿಸಿ, ವಿಷ್ಣುಭಕ್ತನನ್ನು ಕರೆಯಿಸುವ ಪ್ರಯತ್ನಮಾಡುವ—ನಡೆ.

(ಇಬ್ಬರೂ ಹೊರಡುವರು.)

ಇಲ್ಲಿಗೆ ಪ್ರಥಮಾಂಕವು ಮುಗಿದುದು.

ಶ್ರೀಃ

# ದ್ವಿತೀಯಾಂಕ ಪ್ರಾರಂಭಃ.

(ರಾಜಬೀದಿಯಲ್ಲಿ ಪ್ರಯಾಣವನ್ನಭಿನಯಿಸುತ್ತ ಶಿಷ್ಯಸಮೇತನಾದ ಡಂಭನು ಪ್ರವೇಶಿಸುವನು.)

ಡಂಭ—(ಸಂತೋಷದಿಂದ)

ರಾಗ—(ಜಾಜಿಯಹೂವು ಜೆಳ್ಳಗೆ)

ಮಹಾನುಭಾವನು ನಾನೇ । ಭಲ ಭಲಾ ॥ಪ॥ ನಾನೇ ಬಲುಶೂರ । ನಾನೇ ಬಲುಧೀರ । ನಾನೇ ಸುಕುಮಾರ ಸುಂದರಾಕಾರ ॥೧॥ ನಾನೇ ಧನವಂತ । ನಾನೇ ಗುಣವಂತ । ಎನ್ನನೇ ಎಲ್ಲರು ಬಣ್ಣಿಸುತಿಹರು ॥೨॥ ಇಪ್ಪತ್ತು ಸಾವಿರ ರೂಪ್ಯವಧನದನು । ಒಪ್ಪಿಸಿ ಮಣಿದನು । ಕಪ್ಪವಕೊಂಡೆನು ॥ ಮಹಾನು ॥೩॥

(ಶಿಷ್ಯನ ಕಡೆಗೆ ನೋಡಿ)

ಎಲೈ ಶಿಷ್ಯನೆ! ನಮ್ಮ ಯೋಗ್ಯತೆಗೆ ಅತ್ಯಲ್ಪವಾದ ಕಾರ್ಯದಲ್ಲಿ ನಮ್ಮ ಮಹಾರಾಜನು ನಮ್ಮನ್ನು ನಿಯೋಗಿಸಿರುವನು. ನಮ್ಮ ರಾಜನಿಗೆ ಪ್ರತಿಪಕ್ಷದವನಾದ ವಿಷ್ಣುಭಕ್ತನನ್ನು ಅರಣ್ಯಪ್ರಾಪ್ತನನ್ನಾಗಿ ಮಾಡಬೇಕೆಂಬುದು ಅಲ್ಪಕಾರ್ಯವಾದರೂ ಉಪೇಕ್ಷಿಸತಕ್ಕದಲ್ಲ. ವಿಷ್ಣುಭಕ್ತನು ಮಧುರಾಪಟ್ಟಣದಲ್ಲಿರುವನೆಂದು ಕೇಳಿದೆನು. ಇರಲಿ ಅಲ್ಲಿಗೆ ಹೋಗಿ ನೋಡುವೆನು. (ಮುಂದೆ ಗಮನವನ್ನು ಅಭಿನಯಿಸಿ, ಸಾವಧಾನದಿಂದ ನೋಡಿ)—ಆಹಾ! ಇದೇ ಮಧುರಾನಗರ! ಇದು ಬಹು ಪುರಾತನವಾದುದೆಂದು ತೋರುವುದು. ಪಗಡೆಯ ಚಾರಿಯಂತೆ ಸಾಲುಸಾಲಾಗಿಯೂ ಸುಸಜ್ಜೀಕೃತವೂ ಮನೋ

ಹರವೂ ಆದ ಸೌಧಗಳಿಂದ ಕೂಡಿದುದಾಗಿಯೂ ಇರುವ ಈ ಪಟ್ಟಣವು ಎಷ್ಟು ರಮ್ಯವಾಗಿರುವುದು ? (ಮತ್ತೂ ನೋಡಿ)

ರಾಗಾ—ಕಮಾಚು ಏಕತಾಳ—(ನಾರೀಮಣಿ ನಿಲ್ಲೇ)

ಮನಕೆಂತು ಸಂತೋಷಮಂ । ಕೊಡುವುದೀ ಸತ್ರಂ॥ಪ॥ ದಿನಪನಬಾಧೆಯಿಂ । ತನುವನು ಪ್ರೇರೆಯಲು । ಜನಗಳ ಗುಂಪಿನಿಂ । ಘನತರ ತಂಪಿನಿಂ ॥ ಮನಕೆಂತು ॥ ೧ ॥ ಸಾರಸಗಳಿಂದ । ಪೂರಿತವಾಗಿಹ । ವರನೀರಕೊಳದಿಂದ । ತರುಗಳ ಸೊಂಪಿನಿಂದ ॥ ಮನಕೆಂತು ॥ ೨ ॥

ಆಹಾ ! ಈ ಸತ್ರವು ಉಪವನದಿಂದಲೂ ನಿರ್ಮಲೋದಕ ಪೂರ್ಣವಾದ ತಟಾಕದಿಂದಲೂ ರಮಣೀಯವಾಗಿರುವುದು. ಇದು ನಮ್ಮ ವಾಸಕ್ಕೆ ಅರ್ಹವಾಗಿರುವುದರಿಂದ ಅಹಂಕಾರಾದಿ ಸಚಿವರು ಬರುವವರೆಗೆ ನಾನಿಲ್ಲಿಯೇ ಶಿಷ್ಯನೊಡನೆ ವಿಶ್ರಮಿಸಿಕೊಳ್ಳುವೆನು.

ಶಿಷ್ಯ (ಪರನಿಂದ)—ಪೂಜ್ಯರೆ ! ಶಿಷ್ಯನಾದ ಪರನಿಂದಾಖ್ಯನು ನಮಸ್ಕರಿಸುವನು.

ಡಂಭ—ವತ್ಸನೆ ! ಕುಳಿತುಕೊಳ್ಳುವ ಅಪೇಕ್ಷೆಯಾಗಿರುವುದು.

ಶಿಷ್ಯ—ಪೂಜ್ಯರೆ ! ಸಮೀಪದಲ್ಲಿಯೇ ವೇತ್ರಾಸನವು ಸಿದ್ಧವಾಗಿರುವುದು.

ಡಂಭ—(ಮುಂದೆ ನೋಡಿ) ಶಿಷ್ಯನೆ ! ಸುಂದರನಾದ ಪುರುಷನೊಬ್ಬನು ಅತಿ ಗರ್ವದಿಂದ ಇತ್ತಕಡೆಗೇ ಬರುತ್ತಿರುವನು. ಈತನ ವೇಷವನು ನೋಡಿದರೆ ನಮ್ಮ ದೇಶೀಯನಂತೆಯೇ ಕಾಣುವನು.

ಶಿಷ್ಯ—ನಮ್ಮ ದೇಶದವನೆಂಬುದರಲ್ಲಿ ಸಂಶಯವಿಲ್ಲ.

ಡಂಭ—ಜಾಗರೂಕನಾಗಿರು.

ಶಿಷ್ಯ—ಅಪ್ಪಣೆ (ಕೈಕಟ್ಟಿಕೊಂಡು ನಿಲ್ಲುವನು.)

(ಅಹಂಕಾರನ ಪ್ರವೇಶ)

ಅಹಂಕಾರ—(ಡಂಭನನ್ನು ನೋಡಿ ಸಂಭ್ರಮದಿಂದ)

ರಾಗಾ—(ರಮ್ಮನವೇ ಸಾಮಿಕಿ)

ಈತನಾರೋ-ಡಂಭನೆಂತಿಹ | ಖ್ಯಾತನು ಶಿಷ್ಯಸಮೇತನಾಗಿಹ ||೮|| ಪೃಥ್ವಿಬಿಂದುಗಳಿಂ-ಮುದ್ರಿತವಾಗಿಹ | ಹೃದಯೋರುಲಲಾಟವು | ಪದಜಾನುಜಂಘವು ||೧|| ಕರಕಂಠಪೃಷ್ಠದೊಳ್ | ಶಿರಬಾಹು ಚುಬುಕದೊಳ್ | ವರಮುದ್ರೆಗಳಿಂ ಪರಿಶೋಭಿಸುತಿಹನು || ಈತನಾರೋ || ೨ || ಸುರುಚಿರಕಟಿಯಲಿ | ವರ ಕರ್ಣಕರದಲಿ | ವರದರ್ಭೆಗಳಿಂದತಿ | ಮೆರೆಯುವ ಸನ್ಮತಿ || ಈತನಾರೋ || ೩ ||

(ಪ್ರಕಾಶವಾಗಿ) ಮುಂದೆ ಬರುವನು.

ಡಂಭ—('ಹುಂ' ಕಾರದಿಂದ ಅಡ್ಡಯಿಸುವನು)

ಅಹಂಕಾರ--(ವಿಸ್ಮಿತನಾಗಿ)ಇದೇನು ? ಹುಂಕಾರದಿಂದಲೇ ತಡೆವನು.

ಶಿಷ್ಯ—ಪೂಜ್ಯರೆ! ದೂರ ನಿಲ್ಲಬೇಕು.

ಅಹಂಕಾರ—(ಪಕ್ಕಕ್ಕೆ ತಿರುಗಿ, ತನ್ನಲ್ಲಿಯೇ) ಆಹಾ! ಬಲು ಚೆನ್ನಾಗಿದೆ. ಶ್ರೋತ್ರಿಯನಾಗಿಯೂ ಅತಿಥಿಯಾಗಿಯೂ ಇರುವ ನನ್ನನ್ನು ಪ್ರತ್ಯುತ್ಥಾನಾದಿಗಳಿಂದ ಕೂಡ ಸತ್ಕರಿಸದವರು ಮನುಷ್ಯರೆ ?

ಡಂಭ—(ಹುಬ್ಬುಗಂಟಿನಿಂದ ಶಿಷ್ಯನನ್ನು ನೋಡುವನು)

ಶಿಷ್ಯ—(ಅಹಂಕಾರನನ್ನು ನೋಡುತ್ತ) ಪೂಜ್ಯರೆ! ನಮ್ಮ ಗುರುಗಳು ತಮ್ಮ ಕುಲಶೀಲಗಳನ್ನು ತಿಳಿಯಲು ಅಪೇಕ್ಷಿಸುವರು.

ಅಹಂ—(ಗರ್ವದಿಂದ) ನಮ್ಮ ಕುಲಶೀಲಗಳನ್ನು ನಾವೇ ಹೇಳಿಕೊ

ಳ್ಳಬೇಕೋ ? ಜಗತ್ತಿನಲ್ಲೆಲ್ಲಾ ''ಮಾಯಾಪುರಿ'' ಎಂಬ ಪಟ್ಟಣವು ಸುಪ್ರಸಿದ್ಧವಾಗಿಲ್ಲವೋ ?

ಶಿಷ್ಯ—ಪೂಜ್ಯರೆ! "ಮಾಯಾಪುರಿ" ಪಟ್ಟಣವನ್ನು ಬಲ್ಲೆವು. ಹೇಳಿರಿ!

ಅಹಂ—ಕೇಳು, ಅಲ್ಲಿ ಪ್ರಖ್ಯಾತನಾದ ''ದುರ್ಧನ'' ನೆಂಬ ಬ್ರಾಹ್ಮಣೋತ್ತಮನ ಮಕ್ಕಳಲ್ಲಿ ನಾನೊಬ್ಬನು. ದಯಾ ಸತ್ಯಾಚಾರಗಳಲ್ಲಿ ನಿಸ್ಸೀಮನಾದ ನನ್ನನ್ನು '' ಅಹಂಕಾರ '' ನೆಂದು ಹೇಳುವರು.

ಡಂಭ—(ಸಂಭ್ರಮದಿಂದೆದ್ದು) ಮಿತ್ರನೆ ! ವಂದಿಸುವೆನು. ನಿನ್ನ ಮಿತ್ರನಾದ ಡಂಭನೇ ನಾನು !

ಅಹಂ—(ವಿಸ್ಮಯಾನಂದದಿಂದ ಡಂಭನ ಕೈಹಿಡಿದು)

ಕಂದ || ಕ್ಷೇಮವೆ ಮಿತ್ರನೆ ಡಂಭನೆ |
ಪ್ರೇಮದೊಳೆಮಗಿತ್ತಭೂಪನಾಜ್ಞೆಯ ಮುದದಿಂ ||
ಸೇಮದಿನಡೆಯಿಸಿನಾವ್ಗಳ್ |
ಭೂಮಿಪನಿಷ್ಟಕ್ಕೆ ಪಾತ್ರರಾಗುವ ಭರದಿಂ ||

ಡಂಭ—ಎಲ್ಲವೂ ಕುಶಲವೇ ಸರಿ.

ಅಹಂ—ಮಿತ್ರನೆ ! ನಮ್ಮ ಮಹಾರಾಜನು ಕಟ್ಟುಮಾಡಿರುವ ಕೆಲಸವು ಎಷ್ಟುಮಟ್ಟಿಗೆ ನೆರವೇರಿತು ? ಲೋಭಾದಿಗಳೆಲ್ಲಿ ?

ಡಂಭ—ಮಿತ್ರನೆ ! ನಾವಿಬ್ಬರೂ ಸೇರಿದಮೇಲೆ ಲೋಭಾದಿಗಳೂ ಇಲ್ಲಿಗೇ ಬರುವರು. ನಮ್ಮ ಮಂಡಲಿಯೆಲ್ಲವೂ ಸೇರಿದರೆ ರಾಜನ ಇಷ್ಟವೂ ಪೂರ್ಣವಾದಂತೆಯೇ ಸರಿ !

ಅಹಂ—ಮಿತ್ರನೆ ! ನಾನು ಬಹು ಆಯಾಸಪಟ್ಟಿರುವೆನು. ಸ್ವಲ್ಪ ವಿಶ್ರಮಿಸಿಕೊಳ್ಳಬೇಕು.

ಡಂಭ—ಮಿತ್ರನೆ ! ನೀನು ಛತ್ರದಬಳಿಗೆ ಹೋಗಿ ವಿಶ್ರಮಿಸಿಕೊಳ್ಳ

ಬಹುದು. ನಾನು ಇತರ ಮಂತ್ರಿಗಳಲ್ಲಿ ಮತ್ತಾರಾರು ಬಂದಿರುವರೋ ನೋಡಿಬರುವೆನು.

ಅಹಂ—ಆಗಬಹುದು. (ಒಳಗೆ ಹೋಗುವನು.)

(ಡಂಭ—ಮುಂದೆ ಬಂದು ಬಗ್ಗಿನೋಡಿ ಸಂತೋಷದಿಂದ)

ಆಹಾ ! ನನ್ನ ನಯನಾರಾಮೆಯಾದ ತೃಷ್ಣೆ, ಈ ಮಂದಿರದ ಬಾಗಿಲಿನಲ್ಲಿಯೇ ನಿಂದಿರುವಳು. (ದೃಷ್ಟಿಸಿನೋಡಿ)

ರಾಗಾ—(ಸುಂದರೀ)

ಸುಂದರಿ ನಿಂದಿರುವಳ್ | ಚಂದದಿ ಬಾಗಿಲೊಳ್ ॥ ಅಂದದಿ ನೋಡುತೆ ಬಂದವರನು ॥ಅ॥ ಶ್ರೋಣಿಯುಭಾರದಿಂ ಘನಲಸಳಾಗಿಹಳು | ಜಾಣೆಯು ಕಡೆಗಣ್ಣನೋಟದಿಜಾಣರ | ತ್ರಾಣವ ಹಿಂಡುವಳು | ಕೇಣವಬಿಡಿಸುತ ॥ ಸುಂದರೀ ॥ ೧ ॥ ಸರಸಿಜಲೋಚನೆ ಶರಗನೋರೆಮಾಡಿ | ತರುಣರಮನವನು ಭರದಿಂದ ಸೆಳೆವಳು|ಗುರುಕುಚಕುಲುಕುತೆ ॥ ಸುಂದರಿ ||೧|| ಹರಿಣಾಕ್ಷಿಯು ಕೂಡಿ ಸ್ಮರನನುಜಯಿಸುವ | ಸ್ಮರಸುಂದರನಾಂ ಬರುವೆನೆಂದರಿತು ॥ ವರಮಣಿಭೂಷಣಾಭರಣಭೂಷಿತಳಾಗಿ ॥ ಸುಂದರಿ ||೩||

ಆಹಾ ! ನನ್ನ ಮನೋಹಾರಿಣಿಯಾದ ತೃಷ್ಣೆ ಇಲ್ಲಿರುವುದರಿಂದ ಲೋಭನೂ ಇಲ್ಲಿಯೇ ಇರಬಹುದು. ಈ ತೃಷ್ಣಾಪರಿಗ್ರಹದಿಂದ ಲೋಭನಲ್ಲಿ ನನಗಿರುವ ದ್ವೇಷವನ್ನು ಬಿಡುವೆನು.

(ಮುಂದೆ ಬರುವನು)

(ಲೋಭನು ತೃಷ್ಣೆಯೊಡನೆ ಮನೆಬಾಗಿಲೊಳ್ ನಿಂದಿರುವನು)

ಲೋಭ—ಪ್ರಿಯೆ ! ಅದೋ ನೋಡು, ಡಂಭನು ಬರುತ್ತಿರುವನು. ನಾನಿನ್ನು ಮರೆಯಾಗುವೆನು, ನಿನ್ನ ಬುದ್ಧಿ ಕೌಶಲ್ಯದಿಂದ ಡಂಭನನ್ನು ಸ್ವಾ

ಧೀನಪಡಿಸಿಕೊಂಡು ನನ್ನ ವಿಷಯದಲ್ಲಿ ಈತನಿಗಿರುವ ದ್ವೇಷವನ್ನು ಹೋಗಲಾಡಿಸಬೇಕು.

ತೃಷ್ಣೆ—(ಮುಗುಳುನಗೆಯಿಂದ) ಆರ್ಯಪುತ್ರ ! ನಿಮ್ಮ ಇಷ್ಟವನ್ನು ನೆರವೇರಿಸುವುದೇ ನನ್ನ ಉದ್ದೇಶವು. ಚಿಂತಿಸಬೇಕಾಗಿಲ್ಲ.

ಲೋಭ—ಹಾಗಾದರೆ ನಾನಿನ್ನು ಮರೆಯಾಗುವೆನು. (ಹೋಗುವನು.)

ಡಂಭ—(ಮುಂದೆ ಬಂದು, ತನ್ನಲ್ಲಿಯೇ) ಆಹಾ! ನಾನು ಬರುವುದನ್ನು ಕಂಡು ಲೋಭನು ಸರಿದುಹೋದನು. ಇದು ನನಗೆ ಅನುಕೂಲವೇ ಆಯಿತು. (ಪ್ರಕಾಶವಾಗಿ, ಮುಂದೆ ಬಂದು ನಿಲ್ಲುವನು.)

ತೃಷ್ಣೆ—ಇದಿರಾಗಿ ಬಂದು ವಿಲಾಸದಿಂದ ಪ್ರಿಯನಿಗೆ ಸುಖಾಗಮನವೆ! ದಾಸಿಯಲ್ಲಿ ಇಂದಾದರೂ ಕೃಪೆಯಾಯಿತೇ ?

ಡಂಭ—ಮನೋಹರೆ! ಇಂತಹ ವಾಗ್ಬಾಣದಿಂದ ನೀನು ನನ್ನನ್ನು ಇರಿಯಬಹುದೇನು?

ತೃಷ್ಣೆ—(ಕೈನೀಡಿ)—

ರಾಗ—ನಾದನಾಮಕ್ರಿಯ.॥ ಆದಿತಾಳ॥( ಪೋಪುದಿದೇತಕೆ)

ನ್ಯಾಯವೇನೋ ಪ್ರಿಯ । ಮಾಯವ ಮಾಳ್ಪುದು ॥ ಪ॥ ಕಾಯಜನುಕ್ರೂರ ಸಾಯಕವ ಬಿಡುವ ॥ ನ್ಯಾಯ॥ಅ॥ ಕೋಮಲಾಂಗ ನಿನ್ನ ಪ್ರೇಮದಿಂದ ಕೂಡಿ । ಕಾಮನಟ್ಟುಳಿಯಂ । ನಾಮರೆವೆ ನಿಶ್ಚಯಂ ॥ ನ್ಯಾಯವೇ ॥ ೧ ॥ ಲಲಿತಾಂಗ ನಿನ್ನ ನಾನಗಲಿದ್ದ ಕಾರಣ । ಖಲಮಾರನೆನ್ನ ಕೊಲುತಿರ್ಪ ಘನ್ನ ॥೨॥ ಛಲವೇತಕೆನ್ನೊಳು । ಸುಲಲಿತಗಾತ್ರನೆ । ಫಲವಿದಬೇಡುವೆ । ಸಲಹೆನ್ನನೆಂಬುವೆ ॥ ನ್ಯಾಯವೇ ॥೩॥

ಡಂಭ—(ತನ್ನಲ್ಲಿ) ಭಲೆ! ನಾನು ಮಾಡಬೇಕೆಂದಿದ್ದ ಕಾರ್ಯವನ್ನು ಈಕೆ ತಾನಾಗಿಯೇ ಮಾಡುವಳು. ಇರಲಿ (ಪ್ರಕಾಶ) ಪ್ರಿಯೆ! ನಿನ್ನ ಸಂದರ್ಶನದಿಂದಲೇ ನನಗೆ ಸಕಲಾರ್ಥಸಿದ್ಧಿಯೂ ಆದಂತಾಯಿತು. ಆದರೂ ಒಂದು ಕೊರತೆಯುಂಟು.

ತೃಷ್ಣೆ—ಪ್ರಿಯನ ಕೊರತೆಗೆ ಕಾರಣವೇನಿರಬಹುದು?

ಡಂಭ—(ತೃಷ್ಣೆಯ ಕೈಹಿಡಿದು)

ರಾಗ—ಕಮಾಚ. ॥ ಏಕತಾಳ (ನಾರೀಮಣಿ ನಿಲ್ಲಾ ರಮಣಿ)

ಕೂಡದೆ ನಿಲ್ಲಲಾರೆನೆ । ಸುಂದರಿ ನಿನ್ನ ॥ಪ॥ ಕಾಡದೆ ದಯಮಾಡೆ ನಿನ್ನ ಬೇಡುವೆ ನಾಮುನ್ನ ॥ ಕೂಡದೆ ॥ ಅ ॥ ಕುಂದರದನೆ, ಶರದಿಂದು ವದನೆ । ಅರವಿಂದನಯನೆ ಜಗ।ಮಂದಗಮನೆ ನಿನ್ನ ॥೧॥ ಸ್ಮರನಧನುವಿಗೆ । ಸರಿ ಶ್ರೀಲ್ವಭ್ರೂಲತೆ । ಜರಿವುದು ಸರಿಯೇನೆ । ವರಕಾಂತೆ ಗುಣವಂತೆ ॥೨॥

ತೃಷ್ಣೆ—ಇಷ್ಟೇ ನಿಮ್ಮ ಕೊರತೆಯೊ?

ಡಂಭ—ಅಹುದು, ಇಷ್ಟೇ ನನ್ನ ಕೊರತೆ.

ತೃಷ್ಣೆ—ಇದಕ್ಕಿಷ್ಟು ವಿಚಾರವೇಕೆ? ಕ್ರೀಡಾಗೃಹವು ಮುಂದೆಯೇ ಇರುವುದು.

ಡಂಭ—ಪ್ರಿಯೆ, ಲೋಭನು ಇರಬಹುದಲ್ಲವೆ?

ತೃಷ್ಣೆ—ಆತನಿಲ್ಲ; ಒಂದುವೇಳೆ ಇದ್ದರೂ ನಿಮ್ಮ ಸಂತೋಷಕ್ಕೆ ಅಭ್ಯಂತರವಿಲ್ಲ.

ಡಂಭ—(ತೃಷ್ಣೆಯ ಹೆಗಲಮೇಲೆ ಕೈಯಿರಿಸಿ)

ರಾಗ—(ನಡೆಮುಡಿ ಜೇಸ)

ನಡೆನಡೇ ಸಖಿ ಉತ್ತುರಾಜ ಸನ್ಮುಖಿ ॥ಪ॥ ಸುಂದರಾಂಗಿಯೆ ನಿನ್ನ । ಚೆಂದವನೋಡಲೆನ್ನೊ । ಛಿಂದು ಕಾಮವೇಗ್ಗಳಿಸಿತು । ಕುಂದರದೆ ರತಿ ಮುಂಪಿರಕೀಗ ॥ನಡೆನಡೇ ಸಖಿ॥

(ಇಬ್ಬರೂ ಮುಂದೆಬಂದು ಏಕಾಸನದಲ್ಲಿ ಕುಳಿತುಕೊಳ್ಳುವರು)

ಡಂಭ—(ತೃಷ್ಣೆಯ ಗಲ್ಲವನ್ನು ಮೇಲಕ್ಕೆತ್ತಿ) ಪ್ರಿಯೆ! ನಿನ್ನ ಕಣ್ಣುಗಳು ಕೆಂಡದಂತೆ ಕೆಂಪಾಗಿರುವುದು, ಕಾರಣವೇನು ?

ತೃಷ್ಣೆ—ನಿದ್ದೆಯಿಲ್ಲದಿರುವುದೇ ಹೊರತು ಬೇರೆ ಕಾರಣವಿಲ್ಲ.

ಡಂಭ—ನಿದ್ರಾಭಂಗಕ್ಕೆ ಕಾರಣವೇನು ?

ತೃಷ್ಣೆ—ಒಬ್ಬನಾಯಕನುಳ್ಳ ಯುವತಿಗೇನಿದ್ರಾಭಂಗವು ಸಹಜವಾಗಿದೆ;-ಹೀಗಿರುವಲ್ಲಿ ನನ್ನನ್ನು ಕುರಿತು—(ತಲೆಬಾಗುವಳು)

ಡಂಭ—(ಸಂತೋಷದಿಂದ) ಬೆನ್ನುತಟ್ಟಿ ಪ್ರಿಯೆ ! ನನಗೆ ಇದೇ ಇಷ್ಟವು.

ತೃಷ್ಣೆ—(ತಿರಸ್ಕಾರದಿಂದ ಮುಖವನ್ನು ತಿರಿಗಿಸಿಕೊಳ್ಳುವಳು.)

ರಾಗ|| (ಮಾರಿದೀಪ್ಯಾಕಾರವ)

ತೋರಿಸೇಪ್ರಾಣೇಶ್ವರಿ, ಮುಖವನು ||ಪ|| ನೀರೇರುಹದಳಲೋಚನೆ ಸಾರಿಬೇಡುವೆ ||ಅನು|| ತಾರೇಶವದನೆಯೆ | ತೋರಿಸೆ ಮುಖವನು | ಮಾರನಾಟದಿಂದತಿ | ಧೀರಳಾಗುತ ಬೇಗ|| ತೋರಿಸೇ || ೧ || ಕುಸುಮಶಯನದೊಳು ದಶವಿಧಚುಂಬಿಸುತ | ಹಸನಾಗಿ ಸುಖವಿಗಾವ | ಬಿಸಜಾಂಬಕಿಯೆ ನೀ || ೨ ||

ತೃಷ್ಣೆ—(ಎದ್ದು ನಿಂತು) ಪ್ರಿಯನೆ ! ತಮ್ಮ ಉದ್ದೇಶಸಿದ್ಧಿಯಾಗಬೇಕಾದರೆ ನನ್ನ ಇಷ್ಟವನ್ನು ನಡೆಯಿಸಿಕೊಡಬೇಕಾಗುವುದು.

ಡಂಭ—(ತೃಷ್ಣೆಯ ಕೈಹಿಡಿದು) ನಿನ್ನ ಇಷ್ಟವನ್ನು ಸಲ್ಲಿಸಿಯೇ ನನ್ನ ಇಷ್ಟಸಿದ್ಧಿಮಾಡಿಕೊಳ್ಳುವೆನು. ನಿನ್ನಿಷ್ಟವೇನೋ ಬೇಗ ತಿಳಿಸು !

ತೃಷ್ಣೆ—(ತಲೆಯನ್ನು ಮೇಲಕ್ಕೆತ್ತಿ) ನನ್ನ ಸಂಗತಿಯಿಂದ ನನ್ನ ಪತಿಯಾದ ಲೋಭನಲ್ಲಿರುವ ದ್ವೇಷವನ್ನು ಬಿಡಬೇಕೆಂಬುದೇ ನನ್ನ ಇಷ್ಟವು.

ಡಂಭ—ಪ್ರಿಯೆ! ನಿನ್ನ ಮುಖಚಂದ್ರನನ್ನು ನೋಡಿದಾಗಲೇ ಲೋಭನಲ್ಲಿದ್ದ ದ್ವೇಷವನ್ನು ಬಿಟ್ಟೆನು. ಇಂದುಮೊದಲು ನಾವಿಬ್ಬರೂ ಒಂದೇ ದೇಹದಂತಿರಲುಳ್ಳವರು.

ತೃಷ್ಣೆ—ನಂಬಿದೆನು. ಪ್ರಿಯನೆ! ಶಯನಗೃಹಕ್ಕೆ ಹೊರಡಬಹುದು.

(ಇಬ್ಬರೂ ಹೊರಡುವರು.)

**ಲೋಭ**—(ಮರೆಯಾಗಿದ್ದವನು ಮುಂದೆ ಬಂದು ಸಂತೋಷದಿಂದ) ಆಹಾ! ತೃಷ್ಣೆಯಿಂದ ನನಗೆ ಎಷ್ಟು ಲಾಭವೂ ಸಂಪನ್ನತೆಯೂ ಲಭಿಸುವುವು? ಇವಳ ಸಹವಾಸದಿಂದ ಡಂಭನು ನನ್ನಲ್ಲಿ ಸ್ನೇಹವುಳ್ಳವನಾಗುವುದು ಎಷ್ಟು ಉತ್ಸಾಹಪ್ರದಸಂಗತಿ!

(ತೆರೆಯ ಕಡೆ)

ಡಂಭ—ಪ್ರಿಯೆ! ನಿನ್ನಿಂದ ನನಗಿಂದು ಸ್ವರ್ಗಸುಖವೇ ಲಾಭವಾಯಿತು.

ಲೋಭ—(ತನ್ನಲ್ಲಿ) ಆಹಾ! ಡಂಭನು ವಿಹಾರದಿಂದ ಸಂತುಷ್ಟನಾಗಿ ಬರುವನು. ಈಗ ನಾನಿಲ್ಲಿರಬಾರದು. (ಮರೆಯಾಗುವನು.)

(ತೃಷ್ಣೆಯ ಕೈಹಿಡಿದು ಡಂಭನು ಬರುವನು.)

ತೃಷ್ಣೆ—ಪ್ರಿಯನ ಆಗಮನವು ಮತ್ತಾವಾಗಲೋ?

ಡಂಭ—ಪ್ರಿಯೆ! ನನ್ನ ವಿರಾಮಕಾಲವನ್ನೆಲ್ಲಾ ನಿನ್ನ ಸಮೀಪದಲ್ಲಿಯೇ ಕಳೆಯುವೆನು.

ತೃಷ್ಣೆ—(ಶಂಕೆಯಿಂದ) ಹಾ, ಮೋಸಹೋದೆನು! ಹೀಗೆಂದು ತಿಳಿದಿದ್ದರೆ, ಅಯ್ಯೋ! ನಿಜವಾಗಿಯೂ ನನ್ನ ಮಾನಾಭಿಮಾನಗಳನ್ನು ಸೂರೆಗೊಡುತ್ತಿರಲಿಲ್ಲ.

ಡಂಭ—ಮನೋರಮೆ! ಹೀಗೇಕೆ ಭೀತಳಾದೆ?

ತೃಷ್ಣೆ—ವಿರಾಮಕಾಲವನ್ನೆಲ್ಲ ನನ್ನಲ್ಲಿಯೇ ಕಳೆಯುವುದಾಗಿ ಹೇಳಿದುದರಿಂದ.

ಡಂಭ – ನನ್ನ ಮಾತಿನಲ್ಲಿ ಭಯವಾಗುವುದೇಕೆ !

ತೃಷ್ಣೆ—ನನಗಿಂತಲೂ ಕೃಶಾಂಗಿ ಅಧಿಕಳಾದುದರಿಂದ.

ಡಂಭ --(ನಕ್ಕು)

ರಾಗಾ || (ಮಾರನಮುಂಗೈಗಿಣಿ)

ಯಾಕೆಚಿಂತಿಪೇಸಖಿ | ರಾಕೇಂದು ಸನ್ಮುಖಿ ||ಪ|| ನೀಕಾತರಳಾಗಿ ಶೋಕದಿ ಕೃಶಳಾಗಿ || ಯಾಕೆ ||ಅನು|| ನಿನಗಿಂತಲೂ ನಮ್ಮ ಕನಕಾಂಗಿಯು ತನ್ನ |ಘನಯೌವನದೊಳು ಮನಗೊಂಡಳುಕೇಳ್ || ಯಾಕೆ || ೧ ||

ಸುಳ್ಳಲ್ಲ, ಪ್ರಿಯೆ! ನಮ್ಮ ಕುಹನೆಯು ತನ್ನ ಯೌವನದಲ್ಲಿ ನಿನ್ನಂತೆಯೇ ಸಾಭೌಗ್ಯವೀಧಿಯನ್ನು ಪ್ರವೇಶಿಸಿದ್ದಳು. ಈಗಲದರ ಫಲವು ವಿಪರೀತವಾಗಿರುವುದು; ನೀನಿನ್ನು ಭಯಪಡಬೇಕಾದುದಿಲ್ಲ.

ತೃಷ್ಣೆ—ಪ್ರಿಯನೆ ! ಹಾಗಾದರೆ ಏಕರೀತಿಯಾಗಿರಬೇಕು.

ಡಂಭ—ಅಭೇದವಾಗಿಯೇ ಇರುವೆನು. ಇನ್ನು ನನಗಪ್ಪಣೆಯನ್ನು ಕೊಡು, ನಮ್ಮ ಮಂತ್ರಿಗಳಲ್ಲಿ ಮತ್ತಾರಾದರೂ ಬಂದಿರುವರೋ ನೋಡಿ ಬರುವೆನು. (ಮುಂದೆ ನೋಡಿ ಗಾಭರಿಯಿಂದ) ಮುಂದೆ ಉಪಾಯವೇನು ? ಪ್ರಿಯೇ ! ಲೋಭನು ಇಲ್ಲಿಗೇ ಬರುವನು. (ಸರಿದು ನಿಲ್ಲುವನು.)

ತೃಷ್ಣೆ—ಉದಾರಹೃದಯನಾದಾತನು ನಿಮ್ಮನ್ನು ಸನ್ಮಾನಿಸುವನಲ್ಲದೆ ತಿರಸ್ಕರಿಸುವುದಿಲ್ಲ.

ಲೋಭ —(ಸಂತೋಷದಿಂದ ಪ್ರವೇಶಿಸುವನು)

ಡಂಭ—(ಸರಿದು ಹೊರಡಲನುವಾಗುವನು)

ಲೋಭ—(ಡಂಭನ ಕೈಹಿಡಿದು) ಮಿತ್ರನೆ! ಸುಕ್ಷೇಮವಷ್ಟೆ? ಆಸನಾಸೀನನಾಗು! (ಆತನೊಡನೆ ತಾನೂ ಆಸನದಲ್ಲಿ ಕುಳಿತುಕೊಳ್ಳುವನು.)

ತೃಷ್ಣೆ—(ಸಂತೋಷದಿಂದ ಇಬ್ಬರಿಗೂ ಮಧ್ಯೆ ಹಿಂದುಗಡೆಯಲ್ಲಿ ನಿಲ್ಲುವಳು)

ಡಂಭ—ಮಿತ್ರನೆ! ಅಹಂಕಾರನು ಛತ್ರದಲ್ಲಿರುವನು. ಇದನ್ನು ತಿಳಿಸಲು ಬಂದ ನಾನು ನಿನ್ನ ಪ್ರಿಯಳಿಂದ ತುಂಬಾ ಆದರಿಸಲ್ಪಟ್ಟೆನು.

ಲೋಭ—(ತೃಷ್ಣೆಯ ಕಡೆ ನೋಡಿ)-ಪ್ರಿಯೆ! ಇವರು ನನ್ನ ವಿಷಯದಲ್ಲಿದ್ದ ದ್ವೇಷಭಾವವನ್ನು ಬಿಟ್ಟಿರುವರೆ?

ತೃಷ್ಣೆ—ಆರ್ಯಪುತ್ರನ ಉದಾರಹೃದಯವನ್ನು ನೋಡಿ ಇವರು ಸುಪ್ರೀತರಾಗಿರುವರು.

ಲೋಭ—ಪ್ರಿಯೆ! ಹಾಗಾದರೆ ವಿಷ್ಣುಭಕ್ತನು ತೃಣಪ್ರಾಯನು.

ತೃಷ್ಣೆ—ಈ ಮಹಾತ್ಮರೂ ತಮ್ಮ ಕಾರ್ಯದಲ್ಲಿ ಸಹಾಯಕರಾಗಿಯೇ ಇರುವರು.

ಲೋಭ—ಪ್ರಿಯೆ! ನೀನು ಇದೇರೀತಿಯಲ್ಲಿದ್ದರೆ ಕೇಳು,

ಕಂದ॥ ಧನಕನಕವಸ್ತುನಿಚಯುವ ।
ಧನದಂಗಧಿಕತರವಾಗಿ ಪಡೆಯುವೆ ಸತತಂ ॥
ಧನಮದಗರ್ವಿತಗಣಮಂ ।
ಕನಕಾಂಗಿಯೆ ನಿನ್ನ ದಾಸ್ಯದೊಳಿಡುವೆ ನೊಲವಿಂ ॥

ತೃಷ್ಣೆ—ಆರ್ಯಪುತ್ರನೆ! ಮೊದಲಿನಿಂದಲೂ ಈ ಸಂಗ್ರಹಬುದ್ಧಿಯಲ್ಲಿಯೇ ಇರುವ ನನಗೆ ನಿಮ್ಮ ಅಪ್ಪಣೆಯೂ ಆದರೆ ಬ್ರಹ್ಮಾಂಡ ಕೋಟಿಯಿಂದಲೂ ಶಾಂತಿಯುಂಟಾಗಲಾರದು.

ಲೋಭ—(ಡಂಭನ ಕೈಹಿಡಿದು) ಮಿತ್ರನೆ! ಪರಸ್ಥಳನೆಂದು ಚಿಂತಿ

ಸಬೇಕಾಗಿಲ್ಲ. ಪರಸ್ಥಳವಾಸಿಗಳಾಗಿರುವ ನಮ್ಮಿಬ್ಬರನ್ನೂ ತೃಷ್ಣೆಯು ಅಭೇದ ಬುದ್ಧಿಯಿಂದ ಉಪಚರಿಸಲು ಸಿದ್ಧವಾಗಿರುವಳು. ನೀನು ಸಂಕೋಚಪಡ ಬಾರದು.

ಡಂಭ—ಮಿತ್ರನೆ! ನಿನ್ನ ಸ್ನೆಹಕ್ಕೂ, ಉದಾರತೆಗೂ ನಾನು ತುಂಬ ಋಣಿಯಾಗಿರುವೆನು. ಇನ್ನು ಮುಂದೆ ನಾವಿಬ್ಬರೂ ಅಭೇದವಾಗಿಯೇ ಇರ ಲುಳ್ಳವರು.

ಲೋಭ—ಮಿತ್ರನೆ! ವಿಷ್ಣುಭಕ್ತನ ನಿಗ್ರಹಕ್ಕೆ ಪ್ರಯತ್ನವು ನಡೆ ದಿರುವುದೆ ?

ಡಂಭ—ನಡೆಯುತ್ತಿರುವುದು, ಆದರೆ ಇನ್ನೂ ನಮ್ಮ ಮಂತ್ರಿಮಂಡಲಿ ಯವರೆಲ್ಲ ಬರಬೇಕಷ್ಟೆ ?

ತೃಷ್ಣೆ—(ತೆರೆಯಕಡೆಗೆ ಕೈತೋರಿಸಿ) ಮಾತ್ಸರ್ಯನೂ ಇತ್ತ ಕಡೆಯೇ ಬರುತ್ತಿರುವನು.

ಡಂಭ }
ಲೋಭ } —(ಉತ್ಸುಕರಾಗಿ ನೋಡುವರು)

(ಮಾತ್ಸರ್ಯನ ಪ್ರವೇಶ)

ಮಾತ್ಸರ್ಯ—ಮಿತ್ರರಿಗೆ ವಂದನೆ |

ಲೋಭ—ಮಿತ್ರನೆ ! ಕುಶಲವೆ ?

ಮಾತ್ಸರ್ಯ—ಮಿತ್ರನೆ! ವಿಷ್ಣುಭಕ್ತನ ನಾಶದ ವೃತ್ತಾಂತವನ್ನು ಕೇಳುವವರೆಗೂ ನನಗೆ ಸುಖವೆಲ್ಲಿಯದು ?

ಡಂಭ—ಮಿತ್ರನೆ! ವಿಷ್ಣುಭಕ್ತನ ವೃತ್ತಾಂತವನ್ನು ತಿಳಿದಮಟ್ಟಿಗೆ ಹೇಳು.

ಮಾತ್ಸರ್ಯ—(ನಿಟ್ಟುಸಿರಿಟ್ಟು) ಮಿತ್ರನೆ! ನಾನು ಬಂದುದು

ಮೊದಲು ಆತನನ್ನು ಕಂಡುಹಿಡಿಯಬೇಕೆಂದು ಮಾಡಿದ ಪ್ರಯತ್ನವೆಲ್ಲವೂ ನಿಷ್ಫಲವಾಯಿತು.

ಡಂಭ—ಮಿತ್ರನೆ! ಈಗ ವಿಷ್ಣುಭಕ್ತನು ಈ ಪಟ್ಟಣದಲ್ಲಿಲ್ಲವೆ?

ಮಾತ್ಸರ್ಯ—ಈಗಲವನು ಈ ಪಟ್ಟಣವನ್ನೇ ಬಿಟ್ಟು ಹೋಗಿರುವನಂತೆ.

ಡಂಭ—(ಸಂತೋಷದಿಂದ) ಹಾಗಾದರೆ ನಮ್ಮ ರಾಜನ ಇಷ್ಟವು ನಿರ್ವಿಘ್ನವಾಗಿಯೇ ಸಿದ್ಧಿಯಾಯಿತು!

ಮಾತ್ಸರ್ಯ—ಮಿತ್ರನೆ! ಇಷ್ಟುಮಾತ್ರಕ್ಕೇ ಹೇಗೆ ಸಂತೋಷಪಡಬಹುದು? ಆ ವಿಷ್ಣುಭಕ್ತನು ಪ್ರಜ್ಞಾವಿವಾಹಕ್ಕಾಗಿಯೇ ಮಿಥಿಲಾಪಟ್ಟಣಕ್ಕೆ ಹೋಗಿದ್ದರೆ, ನಮ್ಮ ಸಾಹಸವು ನಿಷ್ಫಲವಷ್ಟೆ! ಆತನ ಸ್ವಭಾವವನ್ನು ಕಂಡುಹಿಡಿಯಲು ಸಾಧ್ಯವಲ್ಲ.

ಲೋಭ—ಹಾಗಾದರೆ ನಿನ್ನ ಅಭಿಪ್ರಾಯವೇನು?

ಮಾತ್ಸರ್ಯ—ರಾಗ || ದರ್ಬಾರ್ || (ಈವಧೂಮಣಿರಮಣಿ)

ನಂಬಲಾಗದ್ಯೆ ಮಿತ್ರನೆ||ಪ||ಡಂಭದಿಂದ ಚರಿಪನಮ್ಮಾಡಂಬರಕ್ಕೆ ಸಿಲುಕನವನು ||ಅನು|| ಆಡಿದಂಥ ಮಾತುಗಳನು | ಮಾಡದೆಂತು ಬಿಡುವನಲ್ಲ | ಹೇಡಿಯಂತೆ ಚರಿಪನಲ್ಲ | ನಾಡಿನೊಳ್ ಸಮರವನಿಗಿಲ್ಲ || ೧ || ನೀತಿವಂತನಾತಸುಪ್ರಖ್ಯಾತಿಯಾಂತು ಮೆರೆವಧರೆಯೊಳ್ | ಪಿತರದೊಳಾದರೆಮ್ಮಿಂ | ಭೀತಿಪಡುವನಲ್ಲಮನದೊಳ್ || ೨ ||

ಡಂಭ—(ಆಶ್ಚರ್ಯದಿಂದ) ಇದು ಸತ್ಯವೇ?

ಮಾತ್ಸರ್ಯ—ಮಿತ್ರನೆ! ನನ್ನೀಮಾತು ಸತ್ಯವಲ್ಲದಿದ್ದರೆ ಹೇಗೆ ನಾನು ಅಹೋರಾತ್ರಿಯಲ್ಲಿಯೂ ಆತನ ನಿಗ್ರಹೋಪಾಯವನ್ನುಕುರಿತು ತಲ್ಲಣಿಸುತ್ತಿದ್ದೆನೋ?

ಡಂಭ—ಮಿತ್ರನೆ! ನಿನ್ನ ವಚನವು ಸತ್ಯವಿರಬಹುದು. ಇರಲಿ, ಉಪಾಯವನ್ನು ಚಿಂತಿಸುವ, (ಬಗ್ಗಿನೋಡಿ ಕೈನೀಡಿ ತೋರಿಸುತ್ತ)

ಕಂದ|| ಶಿರವಂಬಾಗಿಸಿವಿನಯದಿ |
ವರಮಧುರಾಲಾಪದಿಂದಲ್ವೈತರುತಿರ್ಪಂ ||
ತರುಣನದಾವಂನೋಳ್ಪೊಡೆ |
ಹರಿಭಕ್ತನಮಿತ್ರಶಾಂತನಾಕೃತಿಕೋಕರ್ಲಂ ||

(ಮೂವರೂ ಕುತೂಹಲರಾಗಿ ನೋಡುವರು. ಶಾಂತನು ಪ್ರವೇಶಿಸುವನು)

ಶಾಂತ—(ಸಂತೋಷದಿಂದ)

ರಾಗಾ || ಬೇಹಾಗ್ || ಆದಿತಾಳ || (ಸುಂದರತೆಯಾಂತು)

ಶಾಂತಿಯೇ ನಿತ್ಯಂ ಸಕಲಾರ್ಥಕೆ ಸಾಧನವೊ||ಪ|| ಶಾಂತಾಕಾರನ ಸಾಕ್ಷಾತ್ಕಾರದ ಸಾಧನವೊ||ಅನು|| ಇರುತಿರೆ ಶಾಂತಿ ನಿರಂತರಸುಖವೆಸಿಪುದು | ದುರಾಗ್ರಹನಿಗ್ರಹಕರವಿದು ಕೇಳ್ ಸತ್ಯವು || ೧ || ಅಳಿವುದುಕಾಯವು | ಉಳಿವುದುಕೀರ್ತಿಯು | ಇಳಾತಳದೊಳ್ ಸಚ್ಛೀಲವೆ ಮೆರೆವುದು || ಶಾಂತಿ || ೨ ||

ಡಂಭ—(ತನ್ನಲ್ಲಿ) ಆಹಾ! ಈತನು ಆಕಾರದಲ್ಲಿ ಮಾತ್ರವೇ ಅಲ್ಲ, ನಡೆನುಡಿಗಳಲ್ಲಿಯೂ ಸೌಮ್ಯನಾಗಿರುವನಲ್ಲದೆ ವಿವೇಕನ ಕಡೆಯವನಂತೆ ಕಾಣುವನು. ಈತನಿಂದಲೇನಾದರೂ ವಿಷ್ಣುಭಕ್ತನ ವೃತ್ತಾಂತವು ತಿಳಿಯಬಹುದೋ ನೋಡುವೆನು. (ಪ್ರಕಾಶವಾಗಿ) ಮಹಾತ್ಮರಿಗೆ ವಂದನೆ.

ಶಾಂತ—ಭೂಸುರರಿಗೆ ಪ್ರತಿವಂದನೆ. ತಾವು ಯಾರು ?

ಡಂಭ—ನಾವು ವಿಷ್ಣುಭಕ್ತರಾಜರ ಸಂದರ್ಶನಾರ್ಥಿಗಳಾಗಿ ಬಂದಿರತಕ್ಕವರು.

ಶಾಂತ—ವಿಷ್ಣುಭಕ್ತರಾಜರ ವರ್ತಮಾನವನ್ನು ತಿಳಿಯದೆ ಚಿಂತಿಸುವೆನು.

ಡಂಭ -ಪೂಜ್ಯರೇ! ಇದಕ್ಕಾಗಿ ತಾವು ಚಿಂತಿಸುವುದೇಕೆ?

**ಶಾಂತ**—ಮಹನೀಯರೆ! ನಾನು ವಿವೇಕಮಹಾರಾಜನ ಅಪ್ಪಣೆಯಿಂದ ವಿಷ್ಣುಭಕ್ತನ ಸಂದರ್ಶನಾರ್ಥವಾಗಿ ಬಂದೆನು. ಈ ರಾಜನು ಉನ್ಮತ್ತನಂತೆ ಯಾರಿಗೂ ತಿಳಿಸದೆ ಚಂದ್ರೋದಯವುಳ್ಳ ನಿಶಿಯಲ್ಲಿ ಎಲ್ಲಿಗೋ ಹೊರಟು ಹೋದನಂತೆ.

ಡಂಭ—(ತನ್ನಲ್ಲಿ) ಭಲೇ! ಇದು ನಮ್ಮ ಕಾಮನ ಕೆಲಸವೇ ಸರಿ! ಮಿಥಿಲಾಪಟ್ಟಣಕ್ಕೆ ಹೋಗಿದ್ದರೆ ಅಲ್ಲಿಯ ಮಂತ್ರಿಗೆ ತಿಳಿಯಬೇಕಾಗಿದ್ದಿತು. ಇದು ನಮಗೆ ಶುಭಶಕುನವೇ ಸರಿ. (ಪ್ರಕಾಶ) ಮಹಾತ್ಮರೆ! ತಮ್ಮ ವಾಕ್ಯವು ನಿಜವಾಗಿದ್ದರೆ ನಮ್ಮ ಮನೋರಥವು ಭಗ್ನವಾದಂತೆಯೇ ಸರಿ. ನನ್ನ ಪಾಂಡಿತ್ಯವನ್ನು ತೋರಿಸಿ ಪ್ರಭುಸಮ್ಮುಖದಲ್ಲಿ ಸನ್ಮಾನವನ್ನು ಪಡೆಯಬೇಕೆಂದು ಅತ್ಯಾಶೆಯಿಂದ ಬಂದೆನು. ದೈವಯೋಗವನ್ನು ಮೀರುವವರಾರು?

**ಶಾಂತ**—ಮಹಾತ್ಮರೆ! ನಾನಿನ್ನು ಹೊರಡುವೆನು. (ಹೋಗುವನು)

ಡಂಭ—ಮಿತ್ರನೆ! ನಮ್ಮ ಕಾಮನಶಕ್ತಿ ಅನ್ಯಾದೃಶವಾದುದಲ್ಲವೆ? ಆಶ್ಚರ್ಯ! ಪುಷ್ಪಗಳೇ ಶರಗಳಾಗಿಯೂ, ಇಕ್ಷುದಂಡವೇ ಚಾಪವಾಗಿಯೂ ಉಳ್ಳವನಾಗಿ, ಅಸಾಧಾರಣ ಸ್ತ್ರೀಪುರುಷರನ್ನೂ ತನ್ನ ವಶರನ್ನಾಗಿ ಮಾಡಿಕೊಳ್ಳುವನು.

**ಲೋಭ**—(ತೆರೆಯಕಡೆನೋಡಿ) ಮಿತ್ರನೆ! ಅಪ್ರತಿಮಸಾಹಸಿಯಾದ ನಮ್ಮ ಕಾಮನೂ ಇಲ್ಲಿಗೇ ಬರುತ್ತಿರುವನು. (ಎಲ್ಲರೂ ನೋಡುವರು)

ಕಾಮ—(ಮುಂದೆ ಬಂದು ನಿಟ್ಟುಸಿರಿಡುತ್ತ ನಿಲ್ಲುವನು)

ಡಂಭ—(ಕಾಮನ ಕೈಹಿಡಿದು ಬಳಿಯಲ್ಲಿ ಕುಳ್ಳಿರಿಸಿಕೊಂಡು)—ಮಿತ್ರನೆ! ನಿನ್ನೀ ಅತಿಯಾದ ದುಃಖಕ್ಕೆ ಹೇತುವಾವುದು?

ಕಾಮ—ಸಖನೆ! ಬ್ರಹ್ಮರುದ್ರೇಂದ್ರಾದಿಗಳನ್ನೂ ಜಯಿಸಿದ ಅಮೋಘವಾದ ನನ್ನ ಅಸ್ತ್ರಗಳು ವಿಷ್ಣುಭಕ್ತನಲ್ಲಿ ಉಪಯೋಗವಿಲ್ಲದುದಾಯಿತು.

ಡಂಭ—ಹೇಗೆ ?

ಕಾಮ—ವಿಷ್ಣುಭಕ್ತನು ನನ್ನ ಲಕ್ಷ್ಯಕ್ಕೆ ಸಿಕ್ಕದೆ ತಪೋಗರಿಷ್ಠರಾದ ವಸಿಷ್ಠರ ಆಶ್ರಮವನ್ನು ಸೇರಿದನು. ಹಾ ! ಕಷ್ಟಕಷ್ಟ !

ಡಂಭ—ಆದರೇನಾಯಿತು ಮಿತ್ರನೆ ?

ಕಾಮ—(ದೀನವದನನಾಗಿ)

ರಾಗ || ಕಮಾಚ್ || (ಕಂತುತಾಪನೆಂತುಸೈಪೆ,

ಏನಮಾಡಲೀಗ ನಾನು । ಧೀನನಾದೆನಿನ್ನು ||ಪ|| ಮಾನಿ ವಿಷ್ಣುಭಕ್ತತಾನು ಮಾನ್ಯರನ್ನು ಸೇರಲಿನ್ನು ||ಅನು|| ಅಲ್ಲಿ ವಸಿಪಮಾನ್ಯರಂ । ಕ್ಷುಲ್ಲತನದಿಸೆಣಿಸೆನಾಂ । ಬಲ್ಲೆನವರ ಶೌರ್ಯಮಂ । ಬಲು ಬಲ್ಲವರ್ಕೈ ವಸಿಷ್ಠರು|| ಏನ || ೧ || ಇಂದ್ರನನ್ನೂ ಜಯಿಸಿದೆ । ಚಂದ್ರನನ್ನು ಜಯಿಸಿದೆ । ಚಂದ್ರಚೂಡನನ್ನು ಸುಲಭದಿಂದ ಜಯಿಸಿಬಂದೆನು || ಏನ || ೨ || ವಿಷ್ಣುಭಕ್ತನಲ್ಲಿ ನವಿಶ್ವಾಮಿತ್ರಮುಖ್ಯಸೇನಾಗಣಂ । ಕೃಷ್ಣನಲ್ಲಿ ಪೂತನಿಯೊಲ್ । ಜಿಷ್ಣುಭಾವಬಿಟ್ಟರ್ಕೈ || ಏನ || ೩ ||

ಡಂಭ—ಮಿತ್ರನೆ ! ಸಮಾಧಾನ ಹೊಂದು ! ಅಹಂಕಾರ, ಲೋಭ, ಮಾತ್ಸರ್ಯರೊಡನೆ ನೀನು ಮಿಥಿಲಾಪಟ್ಟಣದಮಾರ್ಗವಾಗಿ ಹೋಗಿ ನಮ್ಮ ಮಹಾರಾಜನಲ್ಲಿದನ್ನು ತಿಳಿಸು. ನಾನು ಕಾರ್ಯಸಾಧನೆಯಾದಲ್ಲದೆ ಬರಲಾರೆನು.

ಕಾಮ—ಮಿತ್ರನೆ ! ನಿನ್ನ ಇಷ್ಟದಂತೆ ನಾನು ಹೋಗುವೆನು, ಆದರೆ ನೀನೊಬ್ಬನೇ ಏನುಮಾಡಬಲ್ಲೆ ?

ಡಂಭ—ಮಿತ್ರನೆ! ಶೌರ್ಯನಿಧಿಯಾದ ನಮ್ಮ ಕ್ರೋಧನು ಬರುವವರೆಗೆ ಈ ಪಟ್ಟಣದಲ್ಲಿದ್ದು ಆತನು ಬಂದನಂತರ ಮುಂದಿನ ಕಾರ್ಯವನ್ನು ಆಲೋಚಿಸುವೆನು.

ಕಾಮ—ಅದು ಯುಕ್ತವಾದುದೇ ಸರಿ. ಇನ್ನು ಇವರೊಡನೆ ನಾನು ಬರುವೆನು.

ಡಂಭ—ಒಳ್ಳೆಯದು. ನಾನೂ ಕ್ರೋಧನನ್ನು ನೋಡಲು ಹೊರಡುವೆನು.

(ಎಲ್ಲರೂ ಹೊರಡುವರು.)

ಇಲ್ಲಿಗೆ ದ್ವಿತೀಯಾಂಕವು ಮುಗಿದುದು.

---

ಶ್ರೀಃ

## ತೃತೀಯಾಂಕ ಪ್ರಾರಂಭಃ

(ರಾಜಮಾರ್ಗದಲ್ಲಿ ಡಂಭನೊಡಗೂಡಿದ ಕ್ರೋಧನಪ್ರವೇಶ)

ಡಂಭ– ಮಿತ್ರನೆ! ಇದೇನು, ನಿನ್ನ ಮುಖವು ಹೀಗೆ ಆರಕ್ತವಾಗಿರುವುದು?

ಕ್ರೋಧ—ನನ್ನ ಸ್ವಭಾವ, ಶಕ್ತಿ, ಪರಾಕ್ರಮಾದಿಗಳಿಗೆ ಅನುಸರಿಸಿರುವುದು,—ಆಶ್ಚರ್ಯವೇನು ?

ಡಂಭ—ಜಗತ್ತಿನಲ್ಲೆಲ್ಲಾ ನೀನೊಬ್ಬನೇ ಶಕ್ತಿವಂತನೆಂದಿರುವೆಯೋ? ಹೇಗೆ ?

ಕ್ರೋಧ—(ಭುಜಾಸ್ಫಾಲನ ಮಾಡಿಕೊಳ್ಳುತ್ತ) ಊ-ಊ-ಊ! ಇಷ್ಟೇ ಅಲ್ಲವೆ, ನಿನಗೆ ತಿಳಿದಿರುವುದು? ಕೇಳು, ಹಾಗಾದರೆ--

ರಾಗ ॥ ನೋ

ಮೂರುಲೋಕವನ್ನು ನಿಮಿಷತೀರುವಷ್ಟರೋಳ್ । ಗಾರುಮಾಡಿಘೋರಕೃತ್ಯಕೀಡುಮಾಡುವೆ ॥ಪ॥ ಸತ್ಯವಂತರಿಂದ ಬೇಗ ಅಸತ್ಯ ನುಡಿಸುವೆ।ಕೃತ್ಯಾಕೃತ್ಯವೆಂಬ ನೀತಿಬಿಡಿಸುವೆ ॥ ಸುರಪನಿಂದ ಬ್ರಹ್ಮಹತ್ಯೆಭರದಿ ನಡೆಸಿದೆ । ಗಿರಿಜೇಶನಿಂದಬೇಗ ಬ್ರಹ್ಮಶಿರವತರಿಸಿದೆ ॥ ೧ ॥ ಶಾಸ್ತ್ರನಿಪುಣರನ್ನು ಅಶಾಸ್ತ್ರಮಾರ್ಗದೊಳ್ । ಪ್ರಶಸ್ತದಿಂ ಪ್ರವೇಶಿಪಂತೆ ಆಶೆತೋರಿಪೆ ॥೨॥

ಇಷ್ಟೇ ಅಲ್ಲ, ಇನ್ನೂ ಉಂಟು, ನನ್ನ ಸಹಚಾರಿಣಿಯಾದ ಹಿಂಸಾದೇವಿಯೊಡಗೂಡಿದರೆ ನನ್ನ ಶಕ್ತಿ ಮತ್ತೂ ಹೆಚ್ಚುವುದು. ಅದು ಹೇಗೆಂದರೆ—

ರಾಗಾ || (ಮೇಲಿನ ಮಟ್ಟು)

ತಂದೆಯನ್ನು ಚಂದದಿಂದ ಕೊಂದುಸುಖಿಸುವೆ | ಬಂಧು ಬಳಗ ತಾಯಿಯನ್ನು ಮುಂದೆ ಕೊಲ್ಲುವೆ || ೪ || ಮಾಡಬಾರದಿದ್ದ ಕಾರ್ಯವಜಾಂಡದೊಳಗೆ ನಾಂ | ಮಾಡುವಂತೆಮಾಡಿ ಜನರ ಭಂಡರೆನಿಸುವೆ || ೫ ||

ಮಿತ್ರನೆ! ನನ್ನ ಶಕ್ತಿ ಹೀಗಿರುವುದು. ವಿಷ್ಣುಭಕ್ತನು ನನ್ನ ಕಣ್ಣಿಗೆ ಗೋಚರನಾಗದೆ ಎಲ್ಲಿಯೋ ಅಡಗಿ ಬದುಕಿಕೊಂಡಿರುವನು !

ಡಂಭ—ಮಿತ್ರನೆ! ವಿಷ್ಣುಭಕ್ತನು ನಸಿವಾಶ್ರಮವನ್ನು ಸೇರಿದನೆಂದು ಕಾಮನು ಹೇಳಿದನು.

ಕ್ರೋಧ—(ಕೋಪಾಟೋಪದಿಂದ) ಎಲೆಲೆ, ಪಾಪಿ ! ಷಂಡ ! ವಸಿಷ್ಠಾಶ್ರಮವನ್ನು ಸೇರಿ ಜೀವಿಸಿರುವೆಯಾ ! ಒಳ್ಳೆಯದಿರಲಿ. (ಡಂಭನನ್ನು ಕುರಿತು)—ಮಿತ್ರನೆ ! ಈಗಲೂ ಮುಳುಗಿ ಹೋಗಿಲ್ಲ. ಈ ಕ್ಷಣವೇ ವಸಿಷ್ಠಾಶ್ರಮವನ್ನು ಪ್ರವೇಶಿಸಿ—

ರಾಗಾ || (ಮೇಲಿನಮಟ್ಟು)

ದುರಾತ್ಮನಾದ ವಿಷ್ಣುಭಕ್ತನನ್ನು ಈಗಲೇ | ದುರಾಗ್ರಹಾದಿ ಸೇನೆಯಿಂದ ಬಂಧಗೊಳಿಸುವೆ || ೬ || ಖರಾಸ್ತ್ರದಿಂದ ದುಷ್ಟನನ್ನು ಕುಟ್ಟಿಕೊಂದು ನಾಂ | ಕರಾರುನಮ್ಮ ರಾಜನಿಷ್ಟಾಪೂರ್ತಿಮಾಡುವೆ || ೭ ||

ಡಂಭ—(ಕ್ರೋಧನ ಕೈಹಿಡಿದು)

ರಾಗಾ || (ಚಂದ್ರಮತೀ ನಡೆಬೇಗ)

ಬಿಡುಕ್ರೋಧ | ಈಭಾವವಂ ||ಪ|| ಜಡಜಾಕ್ಷನಹುದ ಭಜಕನೊಳೀಹರಿ ||ಅನು|| ಶಾಂತಿಗೆಸಿಲಯನು ದಾಂತರಿಗೆರೆಯ

ನು । ಇಂತಿರುವಾತನನೆಂತು ಜಯಿಸುವೆ ॥ ಬಿಡುಕ್ರೋಧ ॥೧॥ ದೀನದಯಾಪರ ಮಾನಿತಗುಣನಿಧಿ । ಜ್ಞಾನಪೂರ್ಣ ಹರಿಧ್ಯಾನದೊಳಿರುತಲ ॥ ಬಿಡು ಕ್ರೋಧ ॥ ೨ ॥ ಧೇನುವಿಗಾಗಿಯಾ ಮಾನಿಗಾಧೇಯನು । ಮೌನಿಯೋಳ್ ಮುಳಿಯಲೇನಾದುದು ಚಿಂತಿಸೈ ॥ ಬಿಡುಕ್ರೋಧ ॥ ೩ ॥

ಕ್ರೋಧ—ಮಿತ್ರನೆ! ಬಲ್ಲೆನು, ಆ ಕೌಶಿಕನಂತೆ ನಾನು ಸ್ವಕಾರ್ಯಕ್ಕಾಗಿ ಪ್ರಯತ್ನಿಸುವನಲ್ಲ. ಸ್ವಾಮಿಕಾರ್ಯಕ್ಕಾಗಿ ಪ್ರಯಾಸಪಡುವ ನನಗೆ ಪರಿಭವವೆಂತಾಗುವುದು ?

ಡಂಭ—ಸಖನೆ! ಸ್ವಭಾವತಃ ಶಾಂತನಾದ ವಸಿಷ್ಠನಲ್ಲಿ ನಿನ್ನ ಕೋಪವೂ, ಆಟೋಪವೂ ಕಾರ್ಯಕಾರಿಯಾಗಲಾರವು. ಒಂದುವೇಳೆ ಆತನು ಕೋಪಿಸಿದನಾದರೆ ನೀನು ಹಿಂದಿರುಗುವುದೇ ಅನುಮಾನವು.

ಕ್ರೋಧ— ಹಾಗೆಯೇ ಹೇಳು; ಇರಲಿ, ನಿನ್ನ ಅಭಿಪ್ರಾಯವೇನೋ ತಿಳಿಯಪಡಿಸು.

ಡಂಭ—ಮಿತ್ರನೆ! ವಸಿಷ್ಠನು ಬ್ರಹ್ಮಪುತ್ರನಾದುದರಿಂದ ವೈಷ್ಣವನಾಗಿಯೂ, ಬ್ರಾಹ್ಮಣ್ಯದಲ್ಲಿ ವಿಶ್ವಾಸವುಳ್ಳವನಾಗಿಯೂ ಇರುವನು. ಆದುದರಿಂದ ನನ್ನ ಶಕ್ತಿಯಿಂದ ಆಶ್ರಮವನ್ನು ಪ್ರವೇಶಿಸಿ ಆತನನ್ನು ಭ್ರಮೆಗೊಳಿಸಿ ಸ್ವಾಧೀನಪಡಿಸಿಕೊಳ್ಳುವೆನು.

ಕ್ರೋಧ—(ಪರಿಹಾಸ್ಯದಿಂದ ನಕ್ಕು) ಮಿತ್ರನೆ! ತಪೋಗರಿಷ್ಠನಾದ ವಸಿಷ್ಠನು ನಿನ್ನ ಡಂಭಕ್ಕೆ ಮೋಸಹೋಗುವನೇನು ?

ಡಂಭ – (ದರ್ಪದಿಂದ) ಉಹೂ! ಸಲಿಗೆಯಿಂದ ನನ್ನ ಮಹಿಮೆಯನ್ನೇ ನೀನರಿಯದಿರುವೆ. ಮಿತ್ರನೆ! ಕೇಳು, ಒಂದಾನೊಂದು ದಿನ ನಾನು ಬ್ರಹ್ಮನನ್ನು ನೋಡಲು ಹೋದೆನು. ನನ್ನನ್ನು ದೂರದಲ್ಲಿಯೇ ಕಂಡು ಬ್ರಹ್ಮದೇವನು

ತನ್ನ ಪತ್ನಿಯಾದ ಸರಸ್ವತಿಯನ್ನು ಕೆಳಗಿಳಿಸಿ, ತನ್ನ ತೊಡೆಯನ್ನು ತೋಳೆದು ಕೊಂಡು ನನ್ನನ್ನು ಇದಿರ್ಗೊಂಡು ಆದರಿಸಿ ತೊಡೆಮೇಲೆ ಕುಳ್ಳಿರಿಸಿಕೊಂಡನು. ಬ್ರಹ್ಮನೇ ನನಗಿಷ್ಟು ಸನ್ಮಾನಿಸಿದಮೇಲೆ ವಸಿಷ್ಠನ ಮಾತೇನು ?

ಕ್ರೋಧ—(ನಗುತ್ತ) ಮಿತ್ರನೆ ! ಬ್ರಹ್ಮನೆಂಬ ಹೆಸರನ್ನು ಕೇಳಿದ ಮಾತ್ರದಿಂದಲೇ ನೀನು ಹೇಳಿಕೊಳ್ಳುತ್ತಿರುವ ಈ ಅತಿಶಯೋಕ್ತಿಯಿಂದ ನಿನಗೆ ಡಂಭನೆಂಬ ಹೆಸರು ಅನ್ವರ್ಥವೇ ಆಯಿತು ! ಆಗಲಿ, ಈಗ ಮಾತ್ರ ನೀನು ಈ ವೇಷದಿಂದ ವಸಿಷ್ಠನ ದೃಷ್ಟಿಗೆ ಗೋಚರನಾದರೆ ನಾಮಾವಶಿಷ್ಟನೇ ಆಗುವೆ.

ಡಂಭ—(ಶಂಕೆಯಿಂದ) ಹೇಗೆ ?

ಕ್ರೋಧ—ಹೇಗೆಂದರೆ, ನಿಷ್ಕಾಮಕರ್ಮಯೋಗದಲ್ಲಿರುವ ಆ ತಪೋಧನನು, ಜಗಜ್ಜೇತನಾಗಿರುವ,—ಯಾರಿಂದಲೂ ನಿವಾರಿಸಲಶಕ್ಯನಾಗಿರುವ—ಕ್ರೋಧನಾದ ನನ್ನನ್ನೇ ಲಕ್ಷಿಸತಕ್ಕವನಲ್ಲವೆಂದು ಹೇಳಿದಮೇಲೆ ನಿನ್ನದಾವಗಣನೆಗೆ ಬರುವುದು ?

ಡಂಭ—(ಭಯಸಂಶಯದಿಂದ) ಹಾಗಾದರೆ ಉಪಾಯವೇನು ?

ಕ್ರೋಧ—ಮಿತ್ರನೆ! ವಸಿಷ್ಠನ ಆಶ್ರಮವನ್ನು ಪ್ರವೇಶಿಸದೆ ವನಭಂಗ ಮಾಡುತ್ತಿದ್ದರೆ, ನಮ್ಮನ್ನು ನಿಗ್ರಹಿಸಲು ಬರುವ ವಿಷ್ಣುಭಕ್ತನನ್ನು, ಶ್ರೀರಾಮನನ್ನು ವಂಚಿಸಿದ ಮಾರೀಚನಂತೆ ವಂಚಿಸಿ ಅರಣ್ಯವನ್ನು ಸೇರಿಸಬಹುದು.

ಡಂಭ—(ಕ್ರೋಧನ ಬೆನ್ನತಟ್ಟುತ್ತ ಸಂತೋಷದಿಂದ) ಭಲೆ ! ಮಿತ್ರನೆ ! ಉತ್ತಮವಾದ ಉಪಾಯವೇ ಸರಿ. ನಿನ್ನ ಉಪಾಯಕ್ಕೆ ಮೆಚ್ಚಿದೆನು. ಇನ್ನು ನಾವು ನಮ್ಮ ಬೀಡಿಗೆ ಹೋಗಿ ವೀರರಂತೆ ಧನುರ್ಬಾಣಧರರಾಗಿ ಬರುವ, ಬಾ. (ಹೊರಡುವರು.)

(ವಿಷ್ಕಂಭ)

(ವಸಿಷ್ಠರ ತಪೋವನದಲ್ಲಿ ವನಪಾಲಕನ ಪ್ರವೇಶ)

ವನಪಾಲಕ—(ಗಾಬರಿಯಿಂದ ಸುತ್ತಲೂ ನೋಡುತ್ತ) ಇದೇನು ? ಈವರೆಗೆ ನಮ್ಮ ಗುರುವರ್ಯರ ಆಶ್ರಮಸೀಮಾಂತರದಲ್ಲಿ ಕೂಡ ಕುಹಕವನ್ನು ಚಿತಿಸುವರ ಸುಳಿವಿರುತ್ತಿರಲಿಲ್ಲ. ಈಗ ಹೀಗೆ ಕಳ್ಳರಂತೆ ಹಾವಳಿ ಮಾಡುತ್ತಿರುವ ದುಷ್ಟರಾರಾಗಿರಬಹುದು ? ಎಲ್ಲಿಯವರು ! ಏಕೆ ಬಂದಿರುವರು ? (ಆಲಿಸಿ ಕೇಳಿ) ಓಹೋ! ಇತ್ತಕಡೆಯೇ ಯಾರೋ ಆಲಾಪಿಸುತ್ತಿರುವಂತಿದೆ, ಯಾರೆಂದು ನೋಡುವೆ ನಿರಲಿ, (ಹೋಗುವನು.)

(ಧನುರ್ಬಾಣಧರರಾದ ಕ್ರೋಧ ಡಂಭರುಬರುವರು)

ಕ್ರೋಧ—ಮಿತ್ರನೆ! ಈಗತಾನೆ ಕೂಗುತ್ತ ಹೋದ ವನಪಾಲಕನ ಮಾತಿನಿಂದ ಇದೇ ವಸಿಷ್ಠರ ತಪೋವನವಾಗಿರಬೇಕೆಂದು ತಿಳಿಯುವುದು. (ಸುತ್ತಲೂ ನೋಡಿ ವಿಸ್ಮಯದಿಂದ) ಆಹಾ ! ಸಂದೇಹವೇನದರಲ್ಲಿ ? ಮಿತ್ರನೆ! ನೋಡುನೋಡು, (ಕೈನೀಡಿ ತೋರಿಸುತ್ತ)

ರಾಗ || ಶಂಕರಾಭರಣ || ಸೋಟ್ || (ಎಲ್ಲರೂ ಬನ್ನಿರಿ ಭಲ್ಲಿಯ)

ಇದೇನಿದೇನಿದು । ಮದಗಜಾಳಿಯು । ವದಗಿಬಂದ ಸಿಂಹ ಗಣದಿಂಗೂಡಿಮೇಯ್ವುದು ||ಅ|| ನಾಡಪಶುಗಳು ಕಾಡುಪುಲಿ ಗಳು | ಕೂಡಿಮೇದು ನೀರಕುಡಿದು ಆಡುತಿರ್ಪುವುದು || ೧ ||

ಡಂಭ—(ಕೈತೋರಿಸುತ್ತ)

ಹುಲ್ಲೆಮರಿಗಳು ಅಲ್ಲೆನಾಯ್ಗಳು । ಎಲ್ಲಕಲೆತು ಜಲವ ಪೀರಿಮಲಗಿರುವುವು || ಇದೇನಿದೇನಿದು || ೨ ||

ಕ್ರೋಧ—ಮಿತ್ರನೆ! ಈ ತಪೋವನದ ಮಹಾತ್ಮ್ಯೆಯನ್ನು ನೋಡಲು ಕೌತುಕವಾಗುತ್ತಿದೆ

ಡಂಭ—ಮಿತ್ರನೆ! ಇಲ್ಲಿಯೇ ನಿಲ್ಲಲು ಮುಂದೆಹೋದರೆ ನಮ್ಮ ಉದ್ದೇಶಭಂಗವಾಗಬಹುದು.

ಕ್ರೋಧ—ನಿಜ, ಇಲ್ಲಿಯೇ ನಿಂತು, ವನಶೋಭೆಯಲ್ಲಿ ಬೆರಗಾಗಿರುವ ಮನಸ್ಸನ್ನು ವನಭಂಗಕ್ಕೆ ತಿರುಗಿಸಬೇಕು, —ಎಲ್ಲಿ ಜಾಗ್ರತೆಮಾಡು.

ಡಂಭ—(ಕತ್ತಿಯಿಂದ ಗಿಡವನ್ನು ಸವರುತ್ತ ಸಂತೋಷದಿಂದ)—

ರಾಗಾ ‖ ಇಂಗ್ಲಿಷ್ ನೋಟ್ ‖ (ತಡಕಿರೊ ತಡಕಿರೊ)

ಕಡಿಯುವೆಂ ಗಿಡಗಳಂ । ಸಡಗರದಿಂ ಬೇಗ ! ಕಾಡುಮಾಡುವೆಂ । ಖಡುಗದಿಂ ಹೊಡೆಯುತೆ । ಕಡುಮುದದಿಂ ಕಡಿದು ಬಿಸುಡುವೆಂ ‖ ೧ ‖

(ವನಪಾಲಕನು ದೂರದಲ್ಲಿ ಬಂದು ನಿಂತು)

"ಎಲೈ ಶೂರರೆ! ಜಗದ್ವಂದಿತರಾದ ವಸಿಷ್ಠಮಹರ್ಷಿಗಳ ತಪೋವನವಿದು. ಇದನ್ನು ಭಂಗಪಡಿಸುವುದು ಯುಕ್ತವಲ್ಲ, ನಿಲ್ಲಿಸಿರಿ."

ಕ್ರೋಧ—(ರೋಷದಿಂದ ಬಿಲ್ಲಿಗೆ ಹದೆಯನ್ನೇರಿಸುತ್ತ)

ರಾಗಾ ‖ ಜುಂಜೋಟಿ ‖ ಆದಿ ‖ (ನಿಲ್ಲಿಸಿ ನಿಲ್ಲಿಸಿ ನೀತದಸೊಲ್ಲ)

ಬಾರೆಲೊ ಬಾರೆಲೊ ವನಪಾಲಕನೆ । ತೋರುವೆ ನಿನಗೆ ಯಮಲೋಕವನೇ ‖ ೧ ‖ ಶೂರರ ವೀರರ ಜರೆದವನೇ । ತೋರುವೆನಿನ್ನೀಕ್ಷ್ಯೆಗುಣವನ್ನೇ ‖ ೨ ‖ ಚೀರುತಲಿರ್ಪೆಯಾ ನರಾಧಮನೆ । ಹೀರುವೆನಿನ್ನಯ ಶೋಣಿತಮಂ ‖ ೩ ‖

ಡಂಭ—ಎಲಾ! ಹೇಡಿಯೆ! ಅಸಹಾಯಶೂರರಾದ ನಮ್ಮನ್ನು ತಡೆಯಲು ನಿನ್ನಿಂದಾದೀತೆ? ನಿಲ್ಲು! ನಿಲ್ಲು! ಈ ಕ್ಷಣವೇ ನಿನ್ನನ್ನು ಈ ಖಡ್ಗಕ್ಕೆ ಬಲಿ ಕೊಳ್ಳುವೆನು. (ಹೊಡೆಯಲು ಹೋಗುವನು)

ವನ—ದುರಾತ್ಮರೆ ! ನಿಮಗೆ ವಿನಾಶಕಾಲವೇ ಸಮೀಪಿಸಿತು. ನಿಮ್ಮ ದುಷ್ಕಾರ್ಯವನ್ನು ಮಹಾತ್ಮರಿಗೇ ತಿಳಿಸುವೆನು. (ಓಡಿಹೋಗುವನು)

ಕ್ರೋಧ—ಮಿತ್ರನೆ ! ವನಪಾಲಕನು ಓಡಿಹೋದನು, ನಡೆ, ನಾವೂ ಹೋಗಿ ಮರೆಯಾಗಿದ್ದು ಅವರ ಉತ್ತರ—ಪ್ರತ್ಯುತ್ತರವನ್ನು ತಿಳಿಯುವ.

ಡಂಭ—ಆಗಲಿ, ಇದೇ ಆಶ್ರಮವು. (ಮುಂದೆಬಂದು ನಿಂತು ಆಲಿಸಿ ಕೇಳುವರು )

(ತೆರೆಯಲ್ಲಿ) " ಎಲೈ ! ರಾಜಕುಲೋತ್ತಮನೆ ! ನೀನಿಲ್ಲಿಯೇ ಇದ್ದರೆ ನಾನೀಗಲೇ ಹೋಗಿ, ವನಭಂಗಪಡಿಸುತ್ತಿರುವ ಆ ದುರಾತ್ಮರ ಶಾಸನಮಾಡಿ ಬರುವೆನು."

ಕ್ರೋಧ—ಮಿತ್ರನೆ ! ಮುಂದೇನು ಗತಿ ? ಕುಪಿತನಾದ ವಸಿಷ್ಠನೇ ಬರುವಂತಿದೆ

ಡಂಭ—ಏನಂದೆ ? ವಸಿಷ್ಠನೇ ಬರುವನೆ ? ವಿಷ್ಣುಭಕ್ತನೆಲ್ಲಿ ? ರಾಜಕುಲೋತ್ತಂಸನೆಂಬುವನಾರು ?

ಕ್ರೋಧ—(ತಾಳು ತಾಳು, ಉತ್ತರವನ್ನು ಕೊಡುವರಾರೆಂಬುದನ್ನು ತಿಳಿಯುವ. (ಕೇಳುವರು)

(ತೆರೆಯಲ್ಲಿ)—ವಿಷ್ಣುಭಕ್ತ—ಭೃತ್ಯನಿರುವಾಗ ಪ್ರಭುಗಳೇಕೆ ಶ್ರಮಪಡಬೇಕು ? ಅಪ್ಪಣೆಯಾಗಲಿ, ಆ ದುಷ್ಟರ ಗರ್ವವನ್ನು ಈ ಭೃತ್ಯನೇ ಮುರಿಯಬಲ್ಲನು.

ಕ್ರೋಧ—(ಸಂಭ್ರಮದಿಂದ) ಅದೀಗಸರಿ, ವಿಷ್ಣುಭಕ್ತನಿರುವಾಗ ವಸಿಷ್ಠನೇಕೆ ಬರಬೇಕು ? ಅವನನ್ನು ಬಾರೆಂದು ಅಪೇಕ್ಷಿಸುವರಾರು ? ನೋಡು, ವಿಷ್ಣುಭಕ್ತನೇ ಬರುವಂತಿದೆ

ಡಂಭ—ಎಲ್ಲಿ ? (ಕುತೂಹಲದಿಂದ ನೋಡುವನು)

ಕ್ರೋಧ—(ಬಗ್ಗಿನೋಡಿ) ಅದೋ ನೋಡಲ್ಲಿ, ಮಿತ್ರನೆ! ಧನುರ್ಧಾರಿಯಾಗಿ ಬರುವಾತನೇ ವಿಷ್ಣುಭಕ್ತನು.

ಡಂಭ—(ಸಡಗರದಿಂದ ತೊಡೆಯನ್ನು ತಟ್ಟಿಕೊಳ್ಳುತ್ತ) ಎಲೋ! ಮೂರ್ಖನೆ! ಅಲ್ಲಿ ಯಾರನ್ನು ಹುಡುಕುವೆ? ಇತ್ತಬಾ, ನಿನ್ನ ಶಕ್ತಿಯೆಲ್ಲವನ್ನೂ ತೋರಿಸು.

ವಿಷ್ಣು—(ಹರ್ಷದಿಂದ ಕರಖಡ್ಗವನ್ನು ತಿರುಗಿಸುತ್ತ)

ರಾಗ ॥ ಅಠಾಣ ॥ ಚಾಪು ॥ (ಎಲೆ ನೀಚಾಧಮನೆ)

ಕಡುಪಾಪಿಗಳೆ ನಿಮ್ಮಂ ಬಿಡುವೆನೆನಾಂ ॥ಪ॥ ಪಿಡಿದಿರ್ಪೀ ಖಡ್ಗದಿಂದೀಕ್ಷಣಂ । ಘನನೀಚರೆ ನಿಮ್ಮ ಶಿರಂಗಳಂ । ಕಡಿದೀ ಧರೆಯೊಳು ನಾನು ಕೆಡಹದಿರೆ ಹರಿಭಕ್ತನೇನು ॥ ಕಡು ॥ ೧ ॥

ಲೋಭ—(ಅಪಹಾಸ್ಯದಿಂದ) ಓಹೋ! ಹೋ! ಭಲೇ! ಪಟುಭಟನಹುದೋ! ಮೆಚ್ಚಿದೆವು. ಹೂಂ, ಎಲ್ಲಿ. ನಿನ್ನ ಪರಾಕ್ರಮವೆಲ್ಲವನ್ನೂ ಒಂದೇತಡವೆ ತೋರಿಸಿಬಿಡು.

ವಿಷ್ಣು—(ತಿರಸ್ಕಾರದಿಂದ ನೋಡುತ್ತ) ಎಲೆ ಕ್ರೂರಕರ್ಮಿಗಳೇ, ದುರ್ಲಭವಾದ ಮಾನುಷಜನ್ಮವನ್ನು ಪಡೆದೂ ಸಲ್ಲದ ಕಾರ್ಯವನ್ನು ಮಾಡಿ ದುಃಖಭಾಜನರಾಗುವಿರೇಕೆ? ಮಹಾತ್ಮರ ಕೋಪಾಗ್ನಿಗೆ ಬಲಿಯಾಗಿ ವ್ಯರ್ಥಜೀವಿಗಳೆನಿಸದೆ ಅವರಲ್ಲಿ ಅಪರಾಧಕ್ಷಮೆಬೇಡಿ, ಸಾರ್ಥಕಜೀವಿಗಳೆನಿಸಿರಿ. ನಿಮ್ಮನ್ನು ಕ್ರೂರಮೃಗಗಳನ್ನು ಕೊಲ್ಲುವಂತೆ ತುಂಡಿಸಲು ನನಗೆ ಮನಸ್ಸೊಪ್ಪುವುದಿಲ್ಲ. ಕನಿಕರದಿಂದ ನಿಮಗೆ ಹಿತವನ್ನು ಹೇಳುವೆನು, ಕೇಳಿರಿ.

ಡಂಭ—(ವ್ಯಂಗ್ಯವಾಗಿ ನಕ್ಕು) ಅಹಹಾ! ಹಾ! ಹಾ! ಎಲೆ ಹೇಡಿಯೇ! ಯಾರಿಗೆ ಬುದ್ಧಿಗಲಿಸುವೆ? ಆಯುಧಪಾಣಿಯಾಗಿದ್ದರೂ ಬಾಯಿಮಾತಿನಿಂದಲೇ ಕಾಲಕಳೆವೆಯೇಕೆ? ನಿನ್ನಲ್ಲಿ ಪರಾಕ್ರಮವಿಲ್ಲದಿದ್ದರೆ, ನಮಸ್ಕಾರ

ಆಶ್ರಮವನ್ನು ಸೇರಿ ಈವರೆಗೂ ಜೀವಿಸಿದ್ದಂತೆಯೇ ಮುಂದೆಯೂ ಅಡಗಿ ಜೀವಿಸಿಕೊಂಡಿರು ; ಹೋಗು. ಈ ವ್ಯರ್ಥಾಲಾಪದ ಪೌರುಷಭಾಷಣವನ್ನೂ, ವೀರವೇಷವನ್ನೂ ಮೊದಲು ತ್ಯಜಿಸು. ನಿನ್ನೊಡನೆ ಯುದ್ಧವನ್ನು ಅಪೇಕ್ಷಿಸಲು ಬಂದವರಲ್ಲದೆ ನಿನ್ನೀ ಉಪದೇಶವನ್ನು ಕೇಳಲು ನಾವು ಬರಲಿಲ್ಲ.

ವಿಷ್ಣು—ವಿವೇಕಶೂನ್ಯರೆ! ವಿನಾಶಕಾಲಕ್ಕೆ ಬುದ್ಧಿಯೂ ವಿಪರೀತವಾಗುವುದು ಸಹಜವಾಗುದುದೇ ಸರಿ. ಸಾಯುವಾತನಿಗೆ ಔಷಧವು ದ್ವೇಷವಾಗುವಂತೆ ನಿಮ್ಮ ವಿನಾಶಕ್ಕೆ ಹಿತವೂ ಅಹಿತವಾಗಿ ತೋರಿತು. ಆಗಲಿ, ಮಹಾತ್ಮರ ವಿಷಯಕವಾಗಿ ನೀವು ಅಪಚಾರವನ್ನು ಚಿಂತಿಸಿದಾಗಲೇ ನಿಮಗೆ ಪರಿಭವವು ಸಿದ್ಧವಾಗಿದೆ. ನಿಲ್ಲಿರಿ, ಇನ್ನು ನೀವು ಬ್ರಹ್ಮರುದ್ರಾದಿಗಳನ್ನು ಮರೆಹೊಕ್ಕರೂ ನಿಮ್ಮನ್ನು ವಿಷ್ಣುಭಕ್ತನು ಕ್ಷಮಿಸುವನಲ್ಲ. (ಖಡ್ಗವನ್ನು ತಿರುಗಿಸುವನು.)

ಕ್ರೋಧ—(ರಹಸ್ಯವಾಗಿ) ಮಿತ್ರನೆ! ಈತನ ತೇಜಸ್ಸಿನಮುಂದೆ ನನ್ನ ಕ್ರೋಧವೂ, ದರ್ಪವೂ ನಿಷ್ಪ್ರಯೋಜನವೆನಿಸುವುದು. ಇನ್ನು ನಾವಿಲ್ಲಿದ್ದರೆ ಉಳಿಯಲಾರೆವು. ಮುಂದೆ ಉಪಾಯವೇನು ?

ಡಂಭ—(ರಹಸ್ಯವಾಗಿ) ನಿಜ, ನಿಜ, ಪಲಾಯನವೇ ಉಪಾಯವು, ಓಡು, ಬೇಗ ಓಡು.

(ಇಬ್ಬರೂ ಓಡಿಹೋಗುವರು.)

ವಿಷ್ಣು—(ಸುತ್ತಲೂ ನೋಡುತ್ತ) ಓಡಿದರು, ತಲೆತಪ್ಪಿಸಿಕೊಂಡರು. ಆದರೆ, ಲೋಕಕಂಟಕರಾದ ಇವರನ್ನು ಹೀಗೆಯೇ ಉಪೇಕ್ಷಿಸುವುದು ಸರಿಯಲ್ಲ. ಇರಲಿ, ಬೆನ್ನಟ್ಟಿಕೊಂಡು ಹೋಗಿ ತಕ್ಕ ಶಿಕ್ಷೆಯನ್ನು ಮಾಡಿಯೇ ಬರುವೆನು. (ಹೋಗುವನು)

(ಮಿಥಿಲಾನಗರದ ಉಪವನಪ್ರಾಂತದಲ್ಲಿ ಕ್ರೋಧ ಡಂಭರ ಪ್ರವೇಶ)

ಕ್ರೋಧ—ಮಿತ್ರನೆ! ಇದೇನು ? ವಿಷ್ಣುಭಕ್ತನಿಂದೋಡಿಸಲ್ಪಟ್ಟು ತಲೆತಪ್ಪಿಸಿಕೊಂಡುಬಂದ ನಾವು, ಮಿಥಿಲಾನಗರದ ಉಪವನವನ್ನೇ ಸೇರಿದೆವು ಇಲ್ಲಿ ವಿವೇಕಮಹಾರಾಜನ ಮಂತ್ರಿಗಳು ನಮ್ಮ ಸುಳಿವನ್ನು ಕಂಡರೂ ಸುಮ್ಮ ನಿರಲಾರರು. ನಾವು ಮರೆಯಾಗಿದ್ದೇ ಕಾರ್ಯಸಾಧನವನ್ನು ಮಾಡಬೇಕು.

ಡಂಭ—ನಿಜ, ಹಾಗೆಯೇ ಮಾಡಬೇಕು ನಾನು ಈ ವನದ ಹೊರ ಭಾಗದಲ್ಲಿ ಮರೆಯಾಗುವೆನು.

ಕ್ರೋಧ—ಹಾಗೆಯೇ ಮಾಡು, ನಾನೂ ಮತ್ತೊಂದು ಕಡೆಯಲ್ಲಿ ಮರೆಯಾಗುವೆನು.

ಇಬ್ಬರೂ ಹೋಗುವರು.

ವಿಷ್ಣು—(ಆಯಾಸವನ್ನು ಅಭಿನಯಿಸುತ್ತ) ದುರಾತ್ಮರನ್ನು ಅಟ್ಟಿಸಿಕೊಂಡು ಇಲ್ಲಿಯವರೆಗೂ ಬಂದೆನು. ಆದರೂ ಅವರು ತಲೆತಪ್ಪಿಸಿಕೊಂಡರು. ನನಗೆ ಆಯಾಸವಾದರೋ ಅತಿಯಾಗಿರುವುದು. ಸಂಧ್ಯಾಕಾಲವೂ ಸಮಾಹಿತವಾಗಿರುವುದು. ಇನ್ನು ನಾನು ಆ ದುರುಳರನ್ನು ಹುಡುಕುವುದರಿಂದ ಫಲವಿಲ್ಲ. ತ್ರಿಕಾಲವಂದ್ಯನಾದ ಸೂರ್ಯನನ್ನು ವಂದಿಸಿ, ವಿಶ್ರಾಂತಿಯನ್ನು ಹೊಂದಬೇಕು. (ಮೇಲೆನೋಡಿ) ಆಹಾ! ಸಂಧ್ಯಾರಾಗವು ಎಷ್ಟು ಮನೋಹರವಾಗಿರುವುದು? ಇಂತಹ ಸಮಯದಲ್ಲಿ, ಆಹ್ಲಾದದಾಯಕವಾದ ಈ ಉದ್ಯಾನವನದ ನಿರ್ಮಲವಾರಿಪೂರ್ಣ ಸರಸ್ತೀರದ ರಮ್ಯಪ್ರದೇಶದಲ್ಲಿ, ತಾಪನಿವಾರಣನಾದ ಪರಮಾತ್ಮನ ಧ್ಯಾನಮಾಡುವುದಕ್ಕೆ ಸಿಕ್ಕಿನ ಆನಂದವುಂಟೆ ? (ಮುಂದೆಬಂದು ಸರಸ್ತೀರದಲ್ಲಿ ಕುಳಿತು ಕೈಜೋಡಿಸಿ)

ರಾಗಾ || ಪೀಲು || (ಜಯಜಯದೇವಹರೆ

ದಶರಥನಂದನ ಶೌರೆ, ನೃಪತೆ || ಪ || ನವನೀರದಸುಂದರಾಂಗ | ಪಾವನಾತ್ಮಶ್ರೀರಂಗ || ಕವಿಮನೋಬ್ಜಭೃಂಗ | ಸುವಿಮಲಕೃಪಾಂತರಂಗ || ೧ || ದ್ಯುಮಣಿತರಣಿಕೋಟಿನಿಭ | ಚರಣಯುಗಳಭಾಸುರ || ಕರುಣಾಲವಾಲಧೀರ | ವೀರಶೂರಶ್ರೀಮನೋಹರ || ದಶರಥ ||೨|| ಕರಧೃತಶಂಖಚಕ್ರ | ಗರುಡಗಮನ ದೇವದೇವ || ಸರಸಿಜಾಕ್ಷಸುರಪಕ್ಷ | ಪರಿಪಾಹಿ ಶ್ರೀವಕ್ಷ || ದಶರಥ || ೨ ||

(ಧ್ಯಾನಸ್ಥನಾಗುವನು)

ಇಲ್ಲಿಗೆ ತೃತೀಯಾಂಕವು ಮುಗಿದುದು.



ಶ್ರೀಃ

## ಚತುರ್ಥಾಂಕ ಪ್ರಾರಂಭಃ.

(ಪ್ರಯಾಣೋನ್ಮುಖನಾದ ಕಾಮನು ಲೋಭನೊಡನೆ ಮಿಥಿಲಾ ನಗರದ ಮಾರ್ಗದಲ್ಲಿ ಪ್ರವೇಶಿಸುವನು)

ಕಾಮ—(ಸಿಟ್ಟುಸಿಟ್ಟು)

ಕಂದ|| ಕೆಳೆಯನೆಕೇಳ್ ಮೂಲೋಕದ |
ಕಲಿಗಳೊಳೀತನೆ ಕಡುಗಲಿಯೆನಿಸಿದ ನಾನೀ ||
ಖಲನಿಂ ಪರಿಭವವೊಂದುತೆ |
ತಲೆಯೆತ್ತದೊಲಾದೆನೀಗಳಕ್ಕಟದೇವಂ ||

ಲೋಭ—ಮಿತ್ರನೆ! ಅಸಹಾಯಶೂರನಾದ ನೀನೂ ಹೀಗೆ ಚಿಂತಿಸ ಬಹುದೇ ?

ಕಾಮ—(ದುಗುಡದಿಂದ)

ರಾಗ ॥ ಧನಾಸರಿ ॥ ಆದಿತಾಳ ॥ (ಸಖನೆ ಕೇಳಾಶಶಿ)

ಎಂತುನಾತೋರುವೆ, ಭೂಕಾಂತೆಗೆ ಮುಖವನು ||ಪ|| ಇಂತಪಜಯವನಾನೆಂತು ಹಾ ತಾಳುವೆ ||ಅನು|| ಅಂದು ಮಹೇಶನ | ಮುಂದೆ ಪರಾಕ್ರಮ || ವಂದದಿಸೇಳಿದೆ | ಇಂದನರಿಯದೆ || ೧ || ಈ ಸುಮಬಾಣದಿಂ | ವಾಸವಮುಖರನು || ದಾಸರೆನಿಸಿದನಾ | ಕ್ಲೇಶಕೀಡಾಗುತ || ೨ ||

ಲೋಭ—ಮಿತ್ರನೆ! ದುಃಖಿಸಬೇಕಾಗಿಲ್ಲ. ಇದೇ ಮಿಥಿಲಾಪಟ್ಟಣವು. ಸಾಯಂಕಾಲವಾಗಿರುವುದರಿಂದ ಈದಿನ ರಾತ್ರಿಯನ್ನು ಕ್ರೀಡೋದ್ಯಾನದೆಡೆಯಲ್ಲಿ ಕಳೆದು ಆ ಬಳಿಕ ಆಲೋಚಿಸುವ.

ಕಾಮ—(ಸ್ಥಿರಭಾವದಿಂದ) ಮಿತ್ರನೆ! ಶೋಕವನ್ನು ಬಿಟ್ಟೆನು ಶೂರರಿಗೆ ಅತಿಯಾಗಿ ಹಂಬಲಿಸುವುದೂ, ಅಳುವುದೂ ಕಲಂಕವೆಂಬ ನೀತಿಯುಂಟು.

ಪ್ರಯತ್ನಿಸಿದ ಕಾರ್ಯಕ್ಕೆ ವಿಘ್ನವುಂಟಾಯಿತೆಂದು ಬಿಡುವುದು ಸತ್ಪುರುಷರ ಲಕ್ಷಣವಲ್ಲ. ವಿಷ್ಣುಭಕ್ತನಲ್ಲಿ ನನ್ನ ಸಾಹಸವು ಫಲಿಸಲಿಲ್ಲ. ಆದರೂ—

ಕಂ|| ವಿಮಲಪ್ರಜ್ಞೆಯೊಳಾದರು |
ಕಮಲಾಶೋಕಾದಿಸಿತಿತನೆನ್ನಯ ಶರವುಂ ||
ಕ್ರಮದಿಂಪ್ರಯೋಗಿಸುತೆನಾಂ |
ಕಮಲಾಕ್ಷಿಯನಿಂದು ಗೆಲಲು ಯತ್ನವನಾಳ್ವೆಂ ||

(ವೀರಾಸನಾಸೀನನಾಗಿ ಬಾಣಪ್ರಯೋಗಮಾಡಿದಂತೆ ನಟಿಸುವನು.)

(ತೆರೆಯಕಡೆ ಗಲಭೆಯಾಗುವುದು)

ಲೋಭ—ಮಿತ್ರನೆ! ಅತ್ತಕಡೆಯಲ್ಲಿ ಇದೇನೋ ಆರ್ತಾಲಾಪನಾಗುವುದು. (ಕಿವಿಕೊಟ್ಟು ಕೇಳುವನು)

ತೆರೆಯಲ್ಲಿ—ಹಾ! ದೈವವೆ! ನಾನು ಸಹಿಸಲಾರೆನು, ಈ ಯಾತನೆಯನ್ನು ಸಹಿಸಲಾರೆನು.

ಕಾಮ—(ಸಂಭ್ರಮದಿಂದೆದ್ದು) ಮಿತ್ರನೆ! ನನ್ನ ಬಾಣದ ಶಕ್ತಿಯನ್ನು ನೋಡಿದೆಯಾ? ಇನ್ನು ಇಲ್ಲಿರಬಾರದು. ಬಾ-ಮರೆಯಾಗುವ.

ಲೋಭ—ನ್ಯಾಯವೇ ಸರಿ. (ಇಬ್ಬರೂ ಮರೆಯಾಗುವರು.)

(ಉದ್ಯಾನವನದಲ್ಲಿ ಸಖಿಯರೊಡನೆ ತಾಪವನ್ನಭಿನಯಿಸುತ್ತ ಪ್ರಜ್ಞೆಯು ಕುಳಿತಿರುವಳು.)

ಪ್ರಜ್ಞಾ—

ರಾಗ || ಕಾಪಿ || ಆದಿ || (ನೀರೆಯತೋರುಬೇಗ)

ಕಾಣದೆನಿಲ್ಲಲಾರೆ | ಕಾಂತನ ಕರದುತಾರೆ ||ಅನು|| ಸ್ಮರನಸ್ತ್ರಜ್ವಾಲೆಯ ನಾಂ | ತರಹರಿಸಲಾರೆಮುನ್ನ | ಸ್ಮರಕೋಟಿಸುಂದರಾಂಗನಾ || ಕಾಣದೆ || ೧ || ಸಿತಕರಕಿರಣಂಗಳನ್ನು | ಹುತವಹನೋಲ್ ಸುಡುತಿರ್ಪುವೆ | ಧೃತಿಯಕೇಳ್

ಖತಿಗೊಂಡೆನಾಂ ॥ ಕಾಣದೆ ॥೧॥ ಮಲಯಮಾರುತನೆನ್ನ । ನೆಲೆಗೆಡಿಸುವಮುನ್ನ । ಚೆಲುವನತೋರೆ ವಲಯವನೀವೆ ॥ಕಾಣದೆ॥

(ಸ್ತಬ್ಧಳಾಗುವಳು)

ಧೃತಿ—(ಪ್ರಜ್ಞೆಯ ಭುಜದಮೇಲೆ ಕೈಯಿರಿಸಿ ಪ್ರೀತಿಯಿಂದ)

ರಾಗ ॥ ಶಂಕರಾಭರಣ ॥ ಸೈರಿಸು ಸೈರಿಸು)

ಸೈರಿಸುಸೈರಿಸು । ಸರೋಜಾನನೆ ॥ಪ॥ ವರವಿಷ್ಣುಭಕ್ತನು ಬರುವನು ನಿನ್ನೆಡೆಗೆ ॥ಅನು॥ ಸುಮಶಯ್ಯೆಯಮೇಲ್ । ತಾವರೆಯೆಲೆಗಳಂ । ಕಾಮಿನಿತಂದಿಹೆನು । ಪ್ರೇಮದಿಂ ಗ್ರಹಿಸುತೆ ॥೧॥ ಕಾಮಿನೀಮಣಿನಿನ್ನ । ಪ್ರೇಮದಕಾಂತನು ॥ ಕಾಮಿಸಿಪೊಲಿದರೆ । ಸೋಮನುಹಿತನಹ ॥೨॥

ಪ್ರಜ್ಞಾ—(ತಾಪದಿಂದ ನಿಟ್ಟುಸಿರುಬಿಡುತ್ತ ದೈನ್ಯದಿಂದ)

ರಾಗ ॥ ಕಾನಡ ॥ ಅಟತಾಳ ॥ (ಕರೆತರೆರಾಜವದನ)

ಕಾಂತನ, ಕರತಾರೇ ಸಖಿ ॥ಪ॥ ಕರತಾರೆಮನ್ಮನೋಹರನ ಸುಂದರನ । ಸ್ಮರನಸ್ತ್ರಕೆ ಯೆನ್ನ ಗುರಿಗೈದಿರುವನ ॥೧॥ ನಿರ್ದಯಮನ್ಮಥ । ಮರ್ದಿಪಸಂತತ ॥ ನಿರ್ದಾಕ್ಷ್ಯನಾಕಾಂತ । ನಲಿದರ್ಪಿಸುವೆನೆಂತು ॥೨॥ ಮಂದಗಾಮಿನಿ ಕೇಳೆ । ಕಂದಿಕುಂದಿದೆನಲ್ಲೆ ॥ ಕಂದರ್ಪನುರೆಕೊಲ್ವ । ನಿಂದುಬಾರನಲ್ಲ ॥ ಕಾಂತನ ಕರತಾರೇ ಸಖೀ ॥೩॥

ಧೃತಿ—(ಕೈಹಿಡಿದು) ಸಖಿ! ಪ್ರಿಯಸಖಿ! ಇದೇಕೆ ಹೀಗೆ ಅಧೀರಳಾಗುವೆ? ವಿವೇಕವು ರಾಜರಾಜನ ಕುಮಾರಿಯೂ, ಸುಶೀಲೆಯು ಸುಪುತ್ರಿಯೂ ಆದ ನೀನೇ ಹೀಗೆ ಕಾತರಗೊಳ್ಳುವುದೆ? ಸಾಕು ಸಾಕು! ಧೈರ್ಯವನ್ನು ಅವಲಂಬಿಸು.

ಪ್ರಜ್ಞೆ—ಪ್ರಿಯಸಖಿ! ನನಗೆ ತಾಪವು ಅತಿಯಾಗಿರುವುದು. ನನ್ನ ಜನನಿಯನ್ನು ನೋಡಲಪೇಕ್ಷಿಸುವೆನು.

ಧೃತಿ—ರಾಜಪುತ್ರಿ! ನೀನು ಸಮಾಧಾನಚಿತ್ತಳಾಗಿ ಸ್ವಲ್ಪಹೊತ್ತು ಶೃಂಗಾರಮಂಟಪದಲ್ಲಿದ್ದರೆ, ನಾನು ಹೋಗಿ ದೇವಿಯವರನ್ನು ಬೇಗನೆ ಕರೆತರುವೆನು

ಪ್ರಜ್ಞೆ—ಹಾಗಾದರೆ ನನ್ನನ್ನು ಕೈಹಿಡಿದು ಕರೆದುಕೊಂಡುಹೋಗು.

(ಧೃತಿಯು ಪ್ರಜ್ಞೆಯ ಕೈಹಿಡಿದು ಕರೆದೊಯ್ಯುವಳು.)

(ಸುಶೀಲಾರಾಣಿಯ ಅಂತಃಪುರ ದ್ವಾರಪ್ರದೇಶದಲ್ಲಿ-ಧೃತಿಯ ಪ್ರವೇಶ,

ಧೃತಿ—ದೇವಿಯವರನ್ನು ನೋಡಿಬರಬೇಕೆಂದು ರಾಜಕುಮಾರಿಯ ಬಳಿಯಲ್ಲಿ ಶಾಂತಿಯನ್ನು ನಿಲ್ಲಿಸಿ ನಾನು ಅತ್ಯಾತುರದಿಂದ ಬಂದೆನು. ಸುಶೀಲಾರಾಣಿಯವರು ಒಬ್ಬರೇ ಕುಳಿತಿರುವಂತೆ ಕಾಣುವುದು. ಈಗಲೇ ಸಮಯವು ಸರಿಯಾಗಿರುವುದರಿಂದ ಕಾಣಿಸಿಕೊಳ್ಳುವೆನು. (ಮುಂದೆಬಂದು ಪೀಠಸ್ಥಳಾಗಿ ಆಲೋಚನೆಯಲ್ಲಿದ್ದ ರಾಣಿಗೆ ತಲೆಬಾಗಿ) ದೇವಿಯವರಿಗೆ ಮಂಗಳವಾಗಲಿ.

ಸುಶೀಲೆ—ವಿಶೇಷವೇನು? ಪ್ರಜ್ಞೆಯ ದೇಹಾರೋಗ್ಯವು ಹೇಗಿದೆ?

ಧೃತಿ—ದೇವಿ! ಅದನ್ನು ತಿಳಿಸುವುದಕ್ಕಾಗಿಯೇ ಬಂದೆನು. ಸುಕುಮಾರಿಯ ದೇಹಲಾವಣ್ಯವೆಲ್ಲವನ್ನೂ ಮರೆಮಾಡುವ ಘನತರಚಿಂತೆ ಹೆಚ್ಚಾಗುತ್ತಿರುವುದು,ಕ್ಷಣಕ್ಷಣಕ್ಕೂ ದೇಹವು ಬಿಳುಪೇರುತ್ತ ಶಕ್ತಿಕುಂದುತ್ತ ಒರುತ್ತಿರುವುದು.

ಸುಶೀಲೆ—ಹಾಗಾಗಲು ಕಾರಣವೇನು?

ಧೃತಿ—ಹೆಚ್ಚಾಗಿ ಹೇಳಲಾರೆನು.

ಕಂದ|| ನುಡಿಯಳ್ ನಸ್ಮೊಡನೊಲವಿಂ |
ಮುಡಿಯಳ್ ಮಲ್ಲಿಗೆ ಸುಗಂಧಸುಮಗಳ ನೆಲವಿಂ ||
ನುಡಿಸಳ್ ಲೀಲಾಶುಕಮಂ |
ಬಿಡುವಳ್ ಬಿಸುಸುಯ್ಯೆಲರನವರತಂ ಸುತೆತಾಂ ||

ಮತ್ತು

ಧ್ಯಾನಿಸಳಾಸುತೆ ಮನದೊಳ್ ।
ಮಾನಿತನಾವಿಷ್ಣುಭಕ್ತನಂದವನನಿಶಂ ॥
ದೈನ್ಯದಿಕಣ್ಣೀರ್ಸುರಿಪಳ್ ।
ಮಾನಿನಿ ಕಂಗೆಟ್ಟಳಾಮನೋಜನ ಶರದಿಂ ॥

ಸುಶೀಲೆ—ಸುಕುಮಾರಿಯೀಗ ಎಲ್ಲಿರುವಳು ?

ಧೃತಿ—ತಮ್ಮ ಸಂದರ್ಶನಲಾಲಸೆಯಿಂದ ಶೃಂಗಾರಮಂಟಪದಲ್ಲಿರುವಳು. ಸುಕುಮಾರಿಯ ಜೊತೆಯಲ್ಲಿ ಶಾಂತಿಯನ್ನು ಬಿಟ್ಟು, ದೇವಿಯವರಿಗೆ ತಿಳಿಸಲು ನಾನಿತ್ತ ಬಂದೆನು.

ಸುಶೀಲೆ— ಎದ್ದುನಿಂತು) ಹಾಗಾದರೆ ಈಗಲೇ ಬರುವೆನು, ನಡೆ

(ಇಬ್ಬರೂ ಹೊರಡುವರು.)

(ಶೃಂಗಾರಮಂಟಪದಲ್ಲಿ ವಿರಹಾವಸ್ಥೆಯಲ್ಲಿರುವ ಪ್ರಜ್ಞೆಯ ಪ್ರವೇಶ)

ಪ್ರಜ್ಞೆ—(ದೈನ್ಯದಿಂದ ಶಾಂತಿಯನ್ನು ನೋಡುತ್ತ)

ರಾಗ ॥ ಕಮಾಚು॥ ಅಟತಾಳ॥ (ಮೋಹದನಲ್ಲಬಾರೊ)

ಕಾಣದೆ ನಿಲ್ಲಲಾರೆ । ನಲ್ಲನತೋರೆ ॥ ಪ ॥ ಯಾಮಿನೀಶಮುಖಿಯೆ ನೀನು ! ಕಾಮಸುಂದರನನ್ನು । ಭಾಮಿನೀ ಕರತಾರಿನ್ನು । ಕಾಮನ ಜಯಿಸುವನನ್ನು ॥೧॥ ಕೀರದೇರನೇರಿ ಮಾರುತನೊಡಗೂಡಿ । ಧೀರಮಾರಬಿಡುತಿಹ ಕ್ರೂರಶರವನುಹಾ ॥೨॥ ತರಣಿಯಂತಾಪುದೆ ಈ ಶರದಿಂದು ಕಿರಣವ್ರಕೇಳ್ । ಸ್ಮರಕೋಟಿಸುಂದರ । ಬರಲೊಲ್ಲನೇತಕೆ ॥ ಕಾಣದೆ ॥ ೩ ॥

ಶಾಂತಿ—ಪ್ರಿಯಸಖಿ ! ಎಚ್ಚತ್ತುಕೊ. ದೇವಿಯವರು ಬರುವ ಹೊತ್ತಾಯಿತು. ಸ್ವಸ್ಥಳಾಗಿ ಕುಳಿತುಕೋ.

ಪ್ರಜ್ಞೆ—(ಎದ್ದು ಕುಳಿತು ಸುತ್ತಲೂ ನೋಡುತ್ತ ತಾಪಾಧಿಕ್ಯದಿಂದ)

ರಾಗ॥ ಖರಹರಪ್ರಿಯ॥ ರೂಪಕ॥ (ಚಿನ್ನದಾನರಾವಾಡು)

ಎಂತುತಾಳುವೆ | ಹಾ ಹಾ ॥ ಎಂತುತಾಳುವೆ ॥ ಪ ॥ ಕಂತುಕೋಪವಾನುತೆನ್ನನಿಂತುಕೊಲ್ವನಕ್ಕಟಿದನಾ ॥ ನೆಂತು ॥೧॥ ಅಂತರಂಗದಲ್ಲಿಯೆನ್ನಳ್ | ಕಂತುಲೀಲೆಯಿಂದೆರಮಿಸಿ | ಕಾಂತೆಯನ್ನು ಮರೆಯುತಿಂತು | ಕಾಂತಪೋದಕರಣವಾಂತು ॥ಎಂ॥

ಹಾ ಮನೋವಲ್ಲಭ! ನನ್ನ ಹೃದಯವನ್ನು ಕದ್ದೊಯ್ದಂತೆಯೇಪ್ರಾಣವನ್ನೂ ಕದ್ದೊಯ್ಯದೆ ಬಿಟ್ಟೆಯೇಕೆ ? (ಬಿಸುಸುಯ್ಯುವಳು)

ಶಾಂತಿ—(ಚಿಂತೆಯಿಂದ) ಅಯ್ಯೋ ! ನಾನೆಷ್ಟು ಬಗೆಯಿಂದ ಹೇಳಿದರೂ ರಾಜಪುತ್ರಿಯತಾಪವು ಶಮನವಾಗುವಂತಿಲ್ಲ. ಈಗೇನುಮಾಡಲಿ ? ರಾಣಿಯವರಾದರೂ ಬಂದರೆ ?

(ಧೃತಿಯೊಡನೆ ರಾಣಿಯು ಬರುವಳು.)

ಸುಶೀಲಾರಾಣಿ—ಸಖಿ, ಇದೋಬಂದೆನು.

ಶಾಂತಿ—ದೇವಿಯವರೇ ಬಂದು ಪುತ್ರಿಯನ್ನು ಸಂತೈಯಿಸಬೇಕು.

ಸುಶೀಲೆ— ( ಪ್ರಜ್ಞೆಯಬಳಿಗೆಬಂದುಶಲೆಸವರಿ ) ಸುಕುಮಾರಿ ! ಏಳು ಏಳು !

ಪ್ರಜ್ಞೆ—(ತಲೆಯೆತ್ತಿ ದೈನ್ಯದಿಂದ) ಜನನಿ ! ಬಂದೆಯಾ ! ನನ್ನೀ ತಾಪಶಮನವಾಗುವಂತೆ ಮಾಡಲಾರೆಯಾ ?

ಸುಶೀಲೆ—ಮಗಳೆ ? ಧೈರ್ಯವನ್ನು ಅವಲಂಬಿಸು. ನಿನ್ನಿಷ್ಟಾರ್ಥ ಸಿದ್ಧಿಯಾಗುವುದು. ಹೀಗೆ ನೀನು ಅಧೀರಳಾಗಿ ಹಂಬಲಿಸುವುದು ನಿನ್ನ ಸಾಮರ್ಥ್ಯಕ್ಕೂ ನಿನ್ನ ತಾಯಿತಂದೆಗಳ ಶೀಲಕ್ಕೂ ತಕ್ಕುದಲ್ಲ;-ಸಂತೈಸಿಕೊ.

ಪ್ರಜ್ಞೆ—ಜನನಿ ! ನಾನೇನುಮಾಡಲಿ ? ನನ್ನ ಸುಖಕ್ಕಾಗಿ ನೀವು ಕಲ್ಪಿಸಿರುವ ಕ್ರೀಡಾಶೈಲವು ಅಗ್ನಿಕುಂಡದಂತೆಯೂ ಸಖಿಯರು ತಂದೊಪ್ಪಿಸುವ ಮೃಣಾಳವು ಅಸಿಪತ್ರದಂತೆಯೂ ಚಂದ್ರಕಿರಣವು ವರ್ಷಾಕಾಲದ ಸೂರ್ಯಕಿರಣದಂತೆಯೂ ಅನುಲೇಪವೇ ಮೊದಲಾದವು ಅಗ್ನಿಕುಂಡಕ್ಕೆ ಮಾಡುವ ಆಜ್ಯಾಹುತಿಯಂತೆಯೂ ಆಗಿ ಬಸವಳಿಸುತ್ತಿರುವುದು. ತಾಯಿ ! ನೀವು ಸಮ್ಮತಿಸುವುದಾದರೆ ಕ್ರೀಡಾವನಕ್ಕಾದರೂ ಹೋಗಿ ಸ್ವಲ್ಪ ಮನಸ್ಸಮಾಧಾನಪಡಿಸಿಕೊಂಡು ಬರಬೇಕೆಂದು ಬಯಸುವೆನು.

ಸುಶೀಲೆ—ಮಗಳೆ, ನಿನ್ನ ಅಭಿಮತವನ್ನು ಮಹಾರಾಜರಿಗೆ ತಿಳಿಸಿ ಅವರ ಅನುಮತಿಪಡೆದು ಬರುವೆನು.

ಪ್ರಜ್ಞೆ—(ಎದ್ದುನಿಂತು) ಜನನಿ ! ನೀನು ಬರುವವರೆಗೆ ನಾನು ಅಂತಃಪುರದಲ್ಲಿರುವೆನು.

ಸುಶೀಲೆ—ಹಾಗೆಯೇ ಮಾಡು. ನಾನು ಧೃತಿಯೊಡನೆ ಮಹಾರಾಜರನ್ನು ಕಾಣಲು ಹೋಗುವೆನು.

(ಪ್ರಜ್ಞೆ, ಶಾಂತಿಯೊಡನೆ ಹೊರಡುವಳು.)

ಸುಶೀಲೆ—ಧೃತಿ ! ನೀನು ಮುಂದಾಗಿಹೋಗಿ ಮಹಾರಾಜರ ಸಮಯವನ್ನು ನೋಡಿ ಬಾ.

ಧೃತಿ—ಅಪ್ಪಣೆ. (ಹೋಗುವಳು.)

ಸುಶೀಲೆ—(ಬರುತ್ತಾ) ಪುತ್ರಿಯಾದರೊ ಉದ್ಯಾನದಲ್ಲಿ ವಿಹರಿಸಲು ಅಪೇಕ್ಷಿಸುವಳು. ಪ್ರತಿಪಕ್ಷದವರು ಬಂದಿರುವುದಾಗಿ ಕೇಳಿದೆನು. ಈ ಸ

ದರ್ಭದಲ್ಲಿ ನಮಗೆ ಆರ್ಯಪುತ್ರನ ಅನುಮತಿಯಾಗವುದೋ ಹೇಗೋ ತಿಳಿಯೆನು. ಆದರೂ ಪ್ರಯತ್ನಿಸಿ ನೋಡುವೆನು.

ಧೃತಿ—(ಹಿಂತಿರುಗಿ ಬಂದು) ದೇವಿ! ಮಹಾರಾಜರು ಶಾಂತನೊಡನೆ ಮಂತ್ರಾಲೋಚನೆಯಲ್ಲಿರುವರು.

ಸುಶೀಲೆ—ಹಾಗಾದರೆ ಅನುಕೂಲವೇ ಆಯಿತು, ಬಾ ಹೋಗುವ.

(ಹೊರಡುವರು.)

(ಮಂತ್ರಾಲಯದಲ್ಲಿ ಶಾಂತನೊಡನೆ ವಿವೇಕಮಹಾರಾಜನು ಕುಳಿತಿರುವನು)

ಧೃತಿ—(ಮುಂದೆಬಂದು) ದೇವರಿಗೆ ಮಂಗಳವಾಗಲಿ! ದೇವಿಯವರು ಬಂದು ನಿಂತಿರುವರು.

ಶಾಂತ—(ಎದ್ದುನಿಂತು) ವಿಶೇಷವೇನೋ ಇರಬೇಕು. ಅಪ್ಪಣೆಯಾದರೆ ನಾನು ಹೊರಡುವೆನು.

ವಿವೇಕ—ಆಗಬಹುದು. (ಶಾಂತನು ಹೋಗುವನು.)

ವಿವೇಕ—ಸಖಿ! ದೇವಿಯನ್ನು ಬರಹೇಳು. (ಧೃತಿ, ಹೊರಡುವಳು)

ಸುಶೀಲೆ—ಆರ್ಯಪುತ್ರನು ವಿಜಯಿಯಾಗಲೆಂದು ಪ್ರಾರ್ಥಿಸುವೆನು

ವಿವೇಕ—ದೇವಿ, ಆಸನಾಸೀನಳಾಗಿ, ವಿಶೇಷವರ್ತಮಾನವನ್ನು ತಿಳಿಸು. ಸುಕುಮಾರಿಯು ಹೇಗಿರುವಳು?

ಸುಶೀಲೆ—ಆರ್ಯಪುತ್ರ! ಸುಕುಮಾರಿಯ ಸ್ಥಿತಿಯನ್ನೇನೆಂದು ಹೇಳಲಿ? ಸ್ನಾನಪಾನನನ್ನೊಲ್ಲಳು. ಸರಸ ಸಲ್ಲಾಪಗಳನ್ನೇ ಮರೆತಳು. ಅನವರತವೂ ವಿಷ್ಣುಭಕ್ತನ ವಿರಹವನ್ನು ತಡೆಯಲಾರದೆ ಪರಿಪರಿಯಾಗಿ ಕೊರಗುತ್ತಿರುವಳು. ವನಕ್ಕಾದರೂ ಹೋಗಿ ತಾಪಸವ್ರತವನ್ನು ಮಾಡಿಕೊಳ್ಳಬೇಕೆಂದೆಳಸುವಳು.

ವಿವೇಕ—ದೇವಿ! ಪರರಾಜರಕಡೆಯವರು ಬಂದು ಕಾದಿರುವರೆಂದು ತಿಳಿದೆನು. ಈ ಸಮಯದಲ್ಲಿ ಸುಕುಮಾರಿಯನ್ನು ವನಕ್ಕೆ ಕಳುಹುವುದು ಕ್ಷೇಮವಲ್ಲ.

ಸುಶೀಲೆ—ಆರ್ಯಪುತ್ರನೆ! ತಾವು ಸಮ್ಮತಿಸಿದರೆ ಸುಕುಮಾರಿಯೊಡನೆ ನಾನೇ ಹೋಗಿ ಸಮಾಧಾನ ಪಡಿಸಿ ಬರುವೆನು. ಪ್ರತಿಪಕ್ಷದವರ ಬಾಧೆಯನ್ನು ತಪ್ಪಿಸುವುದಕ್ಕಾಗಿ ನಮ್ಮ ಶಾಂತಾದಿ ಮಂತ್ರಿಗಳನ್ನು ಉಪವನದ್ವಾರ ಪ್ರದೇಶದಲ್ಲಿ ಕಾದಿರುವಂತೆ ಕಟ್ಟುಮಾಡಬಹುದು.

ವಿವೇಕ—ದೇವಿ! ನಿನ್ನ ಸಲಹೆ, ಸರಿಯಾಗಿದೆ. ಶಾಂತಾದಿಗಳು ನಿಂತರೆಂದರೆ ಕ್ರೋಧಾದಿಗಳು ನಿರ್ನಾಮರಾಗುವುದರಲ್ಲಿ ಸಂದೇಹವಿಲ್ಲ, ನೀನು ಸಾವಧಾನದಿಂದ ಪ್ರಜ್ಞೆಯನ್ನು ಉಪವನಕ್ಕೆ ಕರೆದುಕೊಂಡು ಹೋಗಿ ಉಪಚರಿಸು. ನಾನು ಶಾಂತಾದಿಗಳನ್ನು ಕಳುಹುವೆನು.

ಸುಶೀಲೆ—ಆರ್ಯಪುತ್ರನೆ! ಹಾಗೆ ಮಾಡಬಹುದು. (ಹೋಗುವಳು)

ವಿವೇಕ—ಯಾರಲ್ಲಿ?

ಸೇವಕ—ಏನಪ್ಪಣೆ?

ವಿವೇಕ—ಶಾಂತನನ್ನು ಕರೆದುಕೊಂಡುಬಾ.

ಸೇವಕ—ಅಪ್ಪಣೆ. (ಹೋಗುವನು.)

ಶಾಂತ—ಮಹಾರಾಜನಿಗೆ ವಿಜಯವಾಗಲಿ! ವಿಶೇಷವೇನು!

ವಿವೇಕ—ಮಂತ್ರಿವರ್ಯನೆ! ದೇವಿಯು ಸುಕುಮಾರಿಯೊಡನೆ ಕಾಂತೋದ್ಯಾನಕ್ಕೆ ಹೋಗಿ ಬರುವೆನೆಂದು ಅನುಮತಿಪಡೆದು ಹೋಗಿರುವಳು. ಪ್ರತಿಪಕ್ಷದವರ ಬಾಧೆಗೊಳಗಾಗದಂತೆ ವಸ್ತುವಿಚಾರ, ಸಂತೋಷರೊಡಗೂಡಿ ನೀನು ಉದ್ಯಾನದಲ್ಲಿ ಕಾವಲಾಗಿರಬೇಕು. ನಾನು ಕಾರ್ಯಾಂತರವನ್ನು ಗಮನಿಸುವೆನು

ಶಾಂತ—ಅಪ್ಪಣೆ. (ರಾಜನು ಹೊರಡುವನು.)

ಶಾಂತ—(ಕಿವಿಕೊಟ್ಟುಕೇಳಿ ಗಾಬರಿಯಿಂದ) ಓಹೋ! ಸಖಿಯರ ಕಲಕಲ ಧ್ವನಿಕೇಳುವುದು, ಮಹಾರಾಣಿಯವರು ಸುಕುಮಾರಿಯೊಡನೆ ವನಕ್ಕೆ ಹೊರಟಿರಬಹುದು. ನಾನಿನ್ನೂ ಇಲ್ಲಿ ವಿಳಂಬಿಸುವುದು ಸರಿಯಲ್ಲ. ನಾನೂ

ವಸ್ತುವಿಚಾರ್, ಸಂತೋಷರೊಡಗೂಡಿ ಸನ್ನಾಹದೊಡನೆ ಜಾಗ್ರತೆಯಾಗಿ ಹೋಗುವೆನು. (ಹೋಗುವನು)

(ಉಪವನದಲ್ಲಿ ಸಖಿಯರೊಡನೆ ಪ್ರಜ್ಞೆಸಹಿತ ಸುಶೀಲೆಯು ಪ್ರವೇಶ)

ಶಾಂತಿ—(ಮುಂದೆಬಂದು ವನಶೋಭೆಯನ್ನು ನೋಡುತ್ತ,

ರಾಗ॥ (ಸಖಿನೋಡುನೋಡು)

ದಯೆಮಾಡಿ ನೋಡುನೋಡುವನವ ಸಾಮಜಯಾನೆ ॥ಪ॥ ನೀರದಸಮತನುರುಚಿರೆಬಾ ಸಾರಸದಳನಯನೆಯೆಬಾ ॥ ತರುಣತರಣಿಕಿರಣಶೋಣಚರಣಯುಗೇಬಾ ॥ ದಯೆ ॥ ೧ ॥ ಅರುಣವಾದ ಚಿಗುರಿನಿಂ ಸರಸಕುಸುಮವಿಸರದಿಂ । ತರುಣೀಮಣಿಯ ಮನಕೆಹರುಷಕೊಡುವುದುತಾಂ॥ ೨ ॥ ಶುಕನ ದಿವ್ಯಗಾನದಿಂ ಪಿಕನಚಟುಲಸುಸ್ವರಗಳಿಂ । ಸಕಲದುಃಖಗಳನು ಬೇಗನಿರಾಕರಿಸುವ್ರೋಲ್ । ೩ ॥

ಪ್ರಜ್ಞೆ—ಪ್ರಿಯಸಖಿಯರೆ! ಫಲಪುಷ್ಪ ಭರಿತವಾದ ಈತರುಲತೆಗಳು ಹೇಗೆ ಶೋಭಿಸುವುವು?

ಸುಶೀಲೆ—ವತ್ಸೆಯರೆ! ಇವು ತಮ್ಮಂತೆಯೇ ಶಾಖೋಪಶಾಖವಾದ ಸಂತಾನ ಸೌಭಾಗ್ಯ ಸಂಪದಗಳಿಂದ ನೀವು ಸುಖಪಡುವಿರೆಂದು ನಿಮ್ಮನ್ನು ಅಭಿನಂದಿಸುತ್ತಿರುವುವು. ಇತ್ತನೋಡಿರಿ ಸದ್ಗುಣಾಲಂಕೃತರಾದ ನಿರ್ಮಲರ ಹೃದಯದಂತೆ ಸರಸೀರುಹಗಳಿಂದ ಕೂಡಿ ಮೆರೆವ ಈ ಸರಸ್ಸನ್ನು—

ಪ್ರಜ್ಞೆ—(ಪುಷ್ಪಾಪಚಯವನ್ನಭಿನಯಿಸುತ್ತ)

ರಾಗ॥ ಶಂಕರಾಭರಣ॥ (ಮಾವಿನತಳಿರದುನೋಡಲ್ಕೆ)

ಮಲ್ಲಿಗೆಸುಮಗಳು ಇಲ್ಲಿ ಇವೆ। ಫುಲ್ಲಾಶೋಕವುಕಾಣುತಿದೆ॥ ಎಲ್ಲರು ಕೂಡುತ ಕುಯ್ಯುವದಾ್। ಪಲ್ಲವಪಾಣಿಯರೇಬನ್ನಿ॥೧॥

ಶಾಂತಿ—ಜಾಜಿಯು ಸುಮವಿದೊ ಪಾಟಲಿಯು | ರಾಜಿಪುದೀಕಡೆನೋಡಿದೆಯಾ ‖ ಭೂಜದಮೇಲಕೆ ಸುತ್ತುತೆನಾಂ | ಸಾಜದಿಕುಯ್ಯುವೆನಿದದನುಂ ‖ ೧ ‖

ಧೃತಿ—ಚಂದಿರಮುಖಿನೋಡಿದಸಿತ್ತ | ಕುಂದಕುಟಜಗಳ ತುಂಬಿಹವತ್ತ | ಮಂದಗಮನೆಯರೆ ನಲಿಯುತೆನಾ ನಂದದಿಸುಮಗಳ ಬಿಡಿಸುವೆನು ‖ ೨ ‖

ಸುಶೀಲೆ—ಸುಕುಮಾರಿಯರೆ! ನೀವಿಲ್ಲಿಯೇ ಪುಷ್ಪಗಳನ್ನು ಬಿಡಿಸುತ್ತಿರುವುದು. ನಾನು ಅಲ್ಲಿ ಕಾಣುವ ಪಾರಿಜಾತವನ್ನು ಬಿಡಿಸಿಕೊಂಡು ಬರುವೆನು. (ಹೋಗುವಳು.)

ಶಾಂತಿ—ಪ್ರಿಯಸಖಿ! ಧೃತಿ! ನೀನು ಆ ಪಾಟಲೀ ವೃಕ್ಷವನ್ನೇರಿ ಪುಷ್ಪಗಳನ್ನು ಬಿಡಿಸಿಕೊಂಡುಬಾ. ನಾನಿಲ್ಲಿಕಾಣುವ ಸುರಗಿಯ ಗಿಡವನ್ನೇರಿ ಹೂವುಗಳನ್ನು ತರುವೆನು.

(ಇಬ್ಬರೂ ಒಂದೊಂದುಕಡೆಗೆ ಹೋಗುವರು.)

ಪ್ರಜ್ಞೆ—ಸಖಿಯರೂ, ಜನನಿಯೂ ಬೇರೆಬೇರೆಕಡೆಗಳಿಗೆ ಹೋಗಿರುವರು. ನಾನು ಸ್ವಲ್ಪಹೊತ್ತು ಈ ಸರಸ್ತೀರದಲ್ಲಿ ವಿಹರಿಸುತ್ತಿರುವೆನು. (ಮುಂದೆಬಂದು ಆಶ್ಚರ್ಯವನ್ನಭಿನಯಿಸುತ್ತ) ಇದೇನು?

ಕಂದ‖ ಅಡಿಗಡಿಗೀಶುಭಶಕುನಂ | ಅಡಿಯಿಡುತೆನ್ನ ಮನಕೆ ನಲವೇರಿಸುತಿ
ರ್ಕುಂ | ಒಡೆಯನ ಕಾಣುವೆನೆಂಬುವ | ಸಡಗರವೊಂದೆ
ನ್ನೊಳಾಗೆ ಕಾರಣಮರಿಯೆಂ ‖

(ಸ್ವಲ್ಪಹೊತ್ತು ಸುಮ್ಮನಿದ್ದು ಮೇಲೆನೋಡುತ್ತ)

ಜಗದೀಶ್ವರನೇ! ಶುಭಶಕುನಂಗಳಿಗೆ ನೀನೇ ಪೋಷಕನಾಗಿದ್ದು ಅಭಿಮತವನ್ನು ಈಡೇರಿಸು. (ಕೈಮುಗಿವಳು.)

(ಮುಂದೆಬಂದು ಪಕ್ಕಕ್ಕೆ ತಿರುಗಿನೋಡಿ ಹಿಮ್ಮೆಟ್ಟಿ ಭ್ರಮೆಹೊಂದಿ ಕುಳಿತುಕೊಂಡು ಕೈತೋರಿಸುತ್ತ)

||ತನ್ನಲ್ಲಿ|| ಹಾ, ಇದೇನು ? ಸ್ವಪ್ನದೃಶ್ಯನಾಗಿದ್ದ ಸುಂದರಾಂಗನು ಇಲ್ಲಿ ಕಾಣಲ್ಪಟ್ಟನು, ನಾನೇನು ಎಚ್ಚರದಲ್ಲಿರುವೆನೊ ? ಸ್ವಪ್ನದಲ್ಲಿರುವೆನೊ ! ಜಾಗರೂಕಳಾಗಿರುವೆನು, ಇದು ಸ್ವಪ್ನವಲ್ಲ. ಸಮಾಧಾನಚಿತ್ತಳಾಗಿರುವೆನು, ಭ್ರಾಂತಿಯೆನ್ನುವುದಕ್ಕೂ ಕಾರಣವಿಲ್ಲ. ಇರಲಿ, ಮತ್ತೊಂದು ಬಾರಿ ಪರಿಶೀಲಿಸುವೆನು. (ನೋಡುವಳು, ಮತ್ತೆ ತತ್ತರಿಸುತ್ತ)--ಹಾ, ಇದೇನು, ಕಣ್ಣುಲೆ ಸುತ್ತಿರುವುದು, ತಲೆತಿರುಗುತ್ತಿರುವುದು, ಅಯ್ಯೋ ! ಕುಳಿತುಕೊಳ್ಳಲಾರೆನು. ಹಾ ಸಖಿಯರೆ ! (ಮಲಗುವಳು.)

(ತೆರೆಯಲ್ಲಿ ಮಹತ್ತರವಾದ ಕೋಲಾಹಲವಾಗುವುದು.)

**ಸುಶೀಲೆ**—(ಸಖಿಯೊಡನೆ ಬಂದು ಗಾಬರಿಯಿಂದ ಸುತ್ತಲೂ ನೋಡುತ್ತ) ಯಾರಲ್ಲಿ, ಪರಿಜನರು ?

**ಪ್ರತೀಹಾರಿ**—ದೇವಿಯವರಿಗೆ ಜಯವಾಗಲಿ ! ಏನಪ್ಪಣೆ ?

**ಸುಶೀಲೆ**—ಇದೇನು, ಇಷ್ಟು ಕೋಲಾಹಲವಾಗುವುದು. ?

**ಪ್ರತೀಹಾರಿ**—ದೇವಿಯವರೆ ! ಉದ್ಯಾನದ ಬಹಿರ್ದ್ವಾರದಲ್ಲಿ ಪ್ರಚ್ಛನ್ನರಾಗಿದ್ದ ಕಾಮ-ಕ್ರೋಧಾದಿಗಳಿಗೂ ನಮ್ಮ ಶಾಂತಾದಿಗಳಿಗೂ ದ್ವಂದ್ವಯುದ್ಧವಾಗುತ್ತಿದ್ದುದರಿಂದ ಕೋಲಾಹಲವಾಯಿತು.

**ಸುಶೀಲೆ**—ಏನು ? ಯುದ್ಧವೆ ? ಸೋತವರಾರು ? ಗೆದ್ದವರಾರು?

**ಪ್ರತೀಹಾರಿ**—ಕಾಮಾದಿಗಳು ಜಿತರಾಗಿ ಓಡಿಹೋದರು. ಶಾಂತಾದಿಗಳು ಜಯಿಸಿದರು. ನಿಮ್ಮ ಪ್ರಜೆಗಳು ಜಯಲಾಭದ ಸಂತೋಷಕ್ಕಾಗಿ ಕೂಗುತ್ತಿರುವರು.

ಸುಶೀಲೆ—ಒಳ್ಳೆಯದಿರಲಿ, ನಿನ್ನ ಕೆಲಸವನ್ನು ನೋಡುತ್ತಿರು.

(ಪ್ರತೀಹಾರಿ ಹೋಗುವಳು.)

ಧೃತಿ—(ಸ್ತಬ್ಧಳಾಗಿ ಮಲಗಿದ್ದ ಪ್ರಜ್ಞೆಯನ್ನು ನೋಡಿ) ಸಖಿ ! ಸುಕುಮಾರಿಯೂ ಇಲ್ಲಿ ಸ್ತಬ್ಧಳಾಗಿರುವಳು !

ಕಾಂತಿ—(ಬಳಿಗೆಬಂದು) ಪ್ರಿಯಸಖಿ! ಕಣ್ತೆರೆ ! ನಿನಗಿಷ್ಟವಾದ ಸುರಗೀ ಪುಷ್ಪವನ್ನು ತಂದಿರುವೆನು, ನೋಡು.

ಪ್ರಜ್ಞೆ—(ಎದ್ದುಕುಳಿತು ಸರಸ್ತೀರದಕಡೆಗೆ ಕೈತೋರಿಸುತ್ತ)

॥ವೃತ್ತ॥ ಇವನಾರಿಂದ್ರನೊ ಚಂದ್ರನೋ ಸ್ಮರಮಹಾರಾಜೇಂದ್ರನೋ ಶ್ರೀಶನೋ.(ಸುಮ್ಮನಾಗುವಳು.)

ಸುಶೀಲೆ—(ಪ್ರಜ್ಞೆಯ ಭುಜದಮೇಲೆ ಕೈಯಿರಿಸಿ, ಗಲ್ಲವನ್ನು ಮೇಲಕ್ಕೆತ್ತಿ) ವತ್ಸೆ! ಸಂತೈಸು, ಸಂತೈಸು !

ಪ್ರಜ್ಞೆ—(ಮೊದಲಿನಂತೆಯೇ ಕೈತೋರಿಸುತ್ತ)

॥ ವೃತ್ತ ॥ ಶಿವ, ಮನಸ್ಸಾಸಸಕಿತ್ತು ನೇತ್ರಯುಗಮಂ ಕೈಕೊಂಡ್ರ ತಾಂಕುಳ್ಳಿಹಂ ॥

ಸುಶೀಲೆ—ವತ್ಸೆ! ಸ್ಪಷ್ಟವಾಗಿ ತಿಳಿಸು. ಇದೇಕೆ, ಹೀಗೆ ಭ್ರಮಿಷ್ಠರಂತಾಡುವೆ ?

ಪ್ರಜ್ಞೆ—(ಸ್ಥಿರಭಾವದಿಂದ ಕುಳಿತು) ಅಮ್ಮಾ ! ಧ್ಯಾನಗೋಚರನಾಗಿದ್ದ ಮನೋವಲ್ಲಭನನ್ನು ಈ ಸರೋವರದ ತೀರದಲ್ಲಿ ಕಂಡೆನು. ಅದುಮೊದಲು ನನ್ನಕಣ್ಣಿಗೆ ಕತ್ತಲೆ ಕವಿದಿರುವುದು.

ಸುಶೀಲೆ—ಸುಕುಮಾರಿ ! ಹಾಗೆ ನಿನ್ನ ಮನೋವಲ್ಲಭನು ಗೋಚರನಾಗಿದ್ದರೆ ಆತನ ಸಮ್ಮುಖವನ್ನುಸಾರಿ ಸಮಾಧಾನ ಹೊಂದಬಹುದಾಗಿದ್ದಿತಲ್ಲವೆ?

AKSHARA GRANTHALAYA
ACC.NO. 111226

ಪ್ರಜ್ಞೆ—ಜನನಿ ! ತಾಯ್ತಂದೆಯರ ಅಧೀನದಲ್ಲಿದ್ದು ಅವರ ಆಜ್ಞೆ ಯಂತೆ ಆಚರಿಸಬೇಕಾದುದೇ ಕುಲಸ್ತ್ರೀಯರ ಧರ್ಮವಲ್ಲವೆ? ನಿಮ್ಮ ಅಪ್ಪಣೆ ಯಿಲ್ಲದೆ ನಾನಾವಕಾರ್ಯವನ್ನೂ ಮಾಡಲಾರೆನು.

ಸುಶೀಲೆ—ವತ್ಸೆ ! ನಿನ್ನ ಸಂಕಲ್ಪವು ಸ್ತುತ್ಯವೇಸರಿ ! ಪರಮೇಶನು ನಿನಗೆ ಪ್ರಸನ್ನನಾಗಿರುವನು. ನೀನಿನ್ನು ಸಂತೋಷಸ್ವಾಂತಳಾಗಿ ಅಂತಃಪುರ ವನ್ನು ಸೇರು. ನಾನು ನಿನ್ನ ತಂದೆಯವರಿಗೆ ಈ ವರ್ತಮಾನವನ್ನು ತಿಳಿಸಿ, ನಿನ್ನ ನಲ್ಲನನ್ನು ಕರೆಯಿಸುವೆನು.

111226

ಪ್ರಜ್ಞೆ—ಹಾಗಾದರೆ, ಜನನಿ ! ನಾನಿನ್ನು ಉತ್ಸಾಹದಿಂದ ಶಾಂತಿ ಯೊಡನೆ ಹೊರಡುವೆನು. (ಹೋಗುವಳು.)

ಸುಶೀಲೆ—ಧೃತಿ ! ಮಹಾರಾಜರ ಸಮಯವನ್ನು ತಿಳಿದುಬಾ.

ಧೃತಿ— ಆಗಬಹುದು. (ಹೋಗುವಳು.)

ಸುಶೀಲೆ—(ಸಂತೋಷದಿಂದ) ಓ ದಯಾಸಾಗರ ! ಸರ್ವೇಶ್ವರ ! ನಿನ್ನ ಕೃಪೆಯು ಅಮೋಘವಾದುದು. ಅಲಭ್ಯವಸ್ತುವನ್ನು ಸೌಲಭ್ಯವಾಗು ವಂತೆ ಮಾಡಿದ ನಿನ್ನ ಮಾಹಾತ್ಮ್ಯೆಯನ್ನು ವರ್ಣಿಸಲಾರಿಗೆ ಅಳವು ? ಸುಕು ಮಾರಿಯ ಸಂತಾಪವನ್ನು ಶಮನಮಾಡಿದಂತೆಯೇ ಈ ವಿವಾಹವನ್ನು ಕೂಡ ನಿರ್ವಿಘ್ನವಾಗಿ ನೆರವೇರಿಸುವುದು ನಿನ್ನ ಇಚ್ಛೆಗೆ ಸೇರಿದುದೇಸರಿ.

ಧೃತಿ—(ಹಿಂತಿರುಗಿ ಬಂದು) ದೇವಿ ! ಮಹಾರಾಜರು ತಮ್ಮನ್ನೇ ಇದಿರು ನೋಡುತ್ತ ಅಂತಃಪುರದಲ್ಲಿರುವರು.

ಸುಶೀಲೆ— ಹಾಗಾದರೆ, ಸಮಯವು ಸರಿಯಾಗಿದೆ, ಬಾ (ಹೊರಡುವರು)

(ವಿವೇಕನು ಒಬ್ಬನೇ ಕುಳಿತು ನಿರೀಕ್ಷಿಸುತ್ತಿರುವನು.)

ವಿವೇಕ—ಇಷ್ಟು ಹೊತ್ತಾದರೂ ದೇವಿಯು ಬರಲಿಲ್ಲವೇಕೆ? ಧೃತಿಯು ಹೋಗಿ ಬಹಳ ಹೊತ್ತಾಯಿತು.

ಸುಶೀಲೆ—(ಮುಂದೆಬಂದು) ಆರ್ಯಪುತ್ರರು ನನಗಾಗಿ ನಿರೀಕ್ಷಿಸುತ್ತಿದ್ದಂತಿದೆ.

ವಿವೇಕ—ಸಂತೋಷದಿಂದ ಸುಶೀಲೆಯ ಕೈಹಿಡಿದು ಬಳಿಯಲ್ಲಿ ಕುಳ್ಳಿರಿಸಿಕೊಂಡು ದೇವಿ! ಪ್ರಜ್ಞೆಯ ದೇಹಸ್ಥಿತಿಹೇಗಿದೆ? ಶುಭವರ್ತಮಾನವೇನು?

ಸುಶೀಲೆ— ರಾಗ॥ (ನಿಮ್ಮ ಜಾಳೀತಕೆ)

ಪ್ರಾಣೇಶ ಲಾಲಿಸೈ ॥ ಪ ॥ ವನದೊಳುಚರಿಸುತ ತನುಜಿಯು ಬರುತಿರೆ । ಕನಸಿನೊಳ್ ಕಂಡನ ಕಾಣುತಮುದದಿಂ॥೧॥ ಕರೆಯಿಸುತಾತನ ಕರದೊಳುತನ್ನನು । ಹರುಷದಿಪರಿಣಯ ವಿರಚಿಪುದೆಂಬಳು ॥ ೨ ॥

ಆದುದರಿಂದ, ಆರ್ಯಪುತ್ರನಲ್ಲಿ. ಈ ಶುಭವರ್ತಮಾನವನ್ನರುಹಲು ಬಂದೆನು.

ವಿವೇಕ—(ಸಂಭ್ರಮದಿಂದ)

ರಾಗ॥ ಕಮಾಜು ॥ ರೂಪಕ॥ (ಪುರುವಂಶವಾರಿಧಿ)

ಶ್ರೀವಾಸನ ಮಹಿಮೆ ಯೇನಪೇಳ್ವೆನಾ ॥ ಪ ॥ ಎಣಿಸಲರಿಯದವನಮಹಿಮೆ ಗುಣಿಸಬಲ್ಲೆವೆ । ಅಣಿಮಾದ್ಯಷ್ಟಸಿದ್ಧಿದಾತನ ಅರಿಯಲಾಪೆವೆ ॥ ಶ್ರೀನಿವಾಸನ ॥ ೧ ॥ ಆಗದಿದ್ದಕಾರ್ಯವನ್ನು ಆಗಮಾಡುವ ಬೇಗನಾಗುವುದನು ಆಗದಂತೆ ಮಾಡುವ ॥ ಶ್ರೀನಿ ॥ ೨ ॥ ಕನಸಿನಲ್ಲಿ ಕಂಡನರನ, ಕರತಂದು ತೋರ್ದನ । ಕರುಣವಿನ್ನೆಷ್ಟೋ ಕಾಣೆ ಕಂಜನೇತ್ರನಾ ॥ ಶ್ರೀನಿ॥ ೩॥

ಸುಶೀಲೆ:—ಆರ್ಯಪುತ್ರನೆ! ವಿಳಂಬಿಸಿದರೆ ಆತನು ಹೊರಟುಹೋಗ ಬಹುದು. ತ್ವರೆಪಡಿಸಬೇಕು. (ಹೋಗುವಳು)

ವಿವೇಕ:—ಸೇವಕರಾರಲ್ಲಿ? ಶಾಂತನನ್ನು ಕರದುಕೊಂಡುಬರಬೇಕು.

(ಶಾಂತ, ಸಂತೋಷ, ವಸ್ತುವಿಚಾರರು ಬರುವರು)

ಸೇವಕ:—ಮಂತ್ರಿವರ್ಯರೇ ಬರುತ್ತಿರುವರು.

ಶಾಂತ:—ಜಯಶೀಲರಾದ ಮಹಾರಾಜರಿಗೆ ವಂದಿಸುವೆನು.

ವಿವೇಕ:—ಮಂತ್ರಿವರ್ಯನೆ! ಉದ್ಯಾನದಲ್ಲಿ ವಿಶೇಷವೇನು?

ಶಾಂತ:—ಅವಧರಿಸಬೇಕು.

[ಕಂದ|| ಕ್ರೋಧಾಮರ್ಷಾದಿಬರಲಾ |
ಬೋಧನದೊಳಗೆನ್ನಯ ನಿಜಶಾಂತತೆಯಿಂದಾ ||
ಕ್ರೋಧನಜಯಿಸಿದೆ ನಲವಿಂ |
ಖೇದದಿಪೊರಮಟ್ಟುಪೋದ ನಿಜಪುರಿಗಾತಂ ||

ಸಂತೋಷ:—ರಾಜಾಧಿರಾಜ ಅವಧರಿಸಬೇಕು.

[ಕಂದ|| ಫಲವಿಧದಿಂದಳೆಗಳೆಯುತೆ |
ಕಲಿತನದಿಂಬಂದ ಲೋಭನಂ ಕೊಳುಗುಳದೋಳ್ ||
ಬಲಮಂಭಂಗಿಸಿ ಹಂಗಿಸಿ |
ತೊಲಗಿಸಿಬಂದೆಂ ನಿಜಗುಣದಿಂದವೆ ಭರದಿಂ ||

ವಸ್ತುವಿಚಾರ:—ಮಹಾರಾಜಾ! ಬಿನ್ನವಪನ್ನು ಲಾಲಿಸಬೇಕು-

ಕಂದ|| ಅತಿಸಾಹಸದಿಂ ದಬಂದಾ |
ರತಿಪತಿಯಂ ನಿಜಗುಣಬಲದಿಂದೆದುರಾಗು ||
ತ್ರುತಿಸುಲಭದಿ ಜಯಿಸಿದೆನಾಂ |
ಜಿತನಾಗಿ ದುಗುಡದಿಪೋದನಾಗಳೆ ಕಾಮಂ ||

ವಿವೇಕ:—(ಸಂತೋಷದಿಂದ)

ರಾಗಾ-ಜುಂಜೂಟಿ (ಗಗನವಚರನೆ)

ಶಾಂತಸದ್ಗುಣವಂತರೇನಿಮ್ಮ ಮಂತ್ರಿತ್ವದಿಂದೆನಾಂ | ಅನಂತಸುಖವನಾಂತು ಜಗದಿ ಶ್ರೀಮಂತನೆನಿಸಿದೆಂ ||ಪ|| ಅವನಿಯೊಳಗೆ ನಿಮ್ಮಸಹಾಯವೆನಗಿರೆ | ವಿವೇಕನಾಮವಡೆದು ಸಾರ್ವಭೌಮನೆನಿಸುವೆ ||೧||

ವಸ್ತು:—ಮಹಾರಾಜಾ! ನಿನ್ನ ತಪೋಬಲಕ್ಕೆ ಮೆಚ್ಚಿದ ಭಗವಂತನೇ ನಿನ್ನೀ ವಿಜಯಾಭ್ಯುದಯಕ್ಕೆ ಕಾರಣಕರ್ತನೆನ್ನಬೇಕಲ್ಲದೆ ನಾವಲ್ಲ.

ವಿವೇಕ:—ನಿಜ, ಎಲ್ಲಕ್ಕೂ ಆತನೇ ಕಾರಣ-ಕಾರ್ಯಕರ್ತನೆನಿಸುವವನು. ಆದರೂ ಆತನ ಪ್ರೇರಣೆಯಿಂದ ಮಾಡಿದವರು ನೀವಾಗಿರುವಿರಿ. ನಿಮ್ಮ ಸಹಾಯವು ನನಗೆ ಸ್ಮರಣೀಯವೇಸರಿ. ಪ್ರಸ್ತುತದಲ್ಲಿ, ಉಪವನದಲ್ಲಿರುವ ವಿಷ್ಣುಭಕ್ತನನ್ನು ಸನ್ಮಾನದಿಂದ ಕರೆತರಬೇಕು. ನಾಳೆಯೇ ಪ್ರಜ್ಞಾಂಬೆಯ ಸ್ವಯಂವರವು ನಿಶ್ಚಿತವಾಗಿರುವುದು. ಪಟ್ಟಣವು ಅಲಂಕೃತವಾಗಲಿ, ಸಕಲ ಸಾಮಂತರಾಜರಿಗೂ ಆಹ್ವಾನಪತ್ರಿಕೆಗಳು ಕಳುಹಿಸಲ್ಪಡಲಿ. ಸ್ವಯಂವರ ಮಂಟಪವು ಸಿದ್ಧವಾಗಲಿ.

ಶಾಂತ:—ಅಪ್ಪಣೆಯಂತೆ ಎಲ್ಲವೂ ನಡೆಯುವುವು.

ವಿವೇಕ:—ಮಂತ್ರಿಗಳೆ! ಆಯಾಸಗೊಂಡಿರುವಿರಿ; ನೀವಿನ್ನು ಹೋಗಿ ವಿಶ್ರಾಂತಿಹೊಂದಿಬನ್ನಿರಿ, ನಾನು ಸುಕುಮಾರಿಯನ್ನು ನೋಡಿಬರಲು ಹೊರಡುವೆನು. (ಎಲ್ಲರೂ ಹೊರಡುವರು)

ಚತುರ್ಥಾಂಕಕ್ಕೆ ಮಂಗಳಂ

ಶ್ರೀಃ

## ಪಂಚಮಾಂಕಪ್ರಾರಂಭ

(ಆಲೋಚನಾಸ್ಥಾನದಲ್ಲಿ ಚಿಂತಾಕ್ರಾಂತನಾದ ಮಹಾಮೋಹನು ಪಾರಿಪಾರ್ಶ್ವಕನೊಡನೆ ಪ್ರವೇಶಿಸುವನು)

ಮಹಾಮೋಹ;—

ರಾಗಾ—ದರ್ಬಾರ್ (ತಿಳಿದುಮಾಳ್ಪದೇ ಹಾಹಾ)

ಮೋಸವಾಯ್ತೇದೆನೋ ಮಿತ್ರಾ ಹಾ, ||ಪ|| ಪಾಪಿಪಂಥದಿ ಶೂರರೆಂದು ಆಶೆಯಿಂದನಂಬಿದೇ || ನಾಂ ||ಅ|| ಶೂರರೆಂದುನಂಬಿಯಿವರ ಭಾರಿಕಜ್ಜಕೆ ಕಳುಪಿದೆಂ । ಬಾರದಿರುವರವರದೇನು ಕಾರಣವೋ ಕಾಣೆ ಹಾ || ಮೋಸ ||೧|| ಕಾಮಮುಖ್ಯರೇಸಾದರೊ—ನಿಷ್ಕಾಮಿ ವಿಷ್ಣುಭಕ್ತನಿಂದ । ನಾಮಮಾತ್ರರಾದರೇನೋ ನಮ್ಮ ಡಂಭಲೋಭರು ||೨|| ಸುರುಚಿರಾಂಗಿಪ್ರಜ್ಞೆಗೆ ಸ್ವಯಂವರವುನಾಳೆಯೆಂದು । ಬರೆದಲಗ್ನಪತ್ರವಿದೇ, ಕರಮಸೇದರ್ಪದೀಗೆಮಗೆ ||೩||

ಪಾರಿಪಾರ್ಶ್ವಕ—||ತನ್ನಲ್ಲಿಯೇ||ನಮ್ಮ ರಾಜನು ಕಾರ್ಯಾಂತರದಲ್ಲಿ ಯೋಚಿಸುವನೇ ಹೊರತು ಕಾರ್ಯಾರಂಭದಲ್ಲಿಯೇ ಯೋಚಿಸಿದ್ದರೆ ನಾನು ವಿವೇಕವನ್ನು ಹೇಳುತ್ತಿದ್ದೆನು. ಇರಲಿ, ಈಗಲೂ ಹೇಳುವೆನು. (ಪ್ರಕಾಶವಾಗಿ) ಮಹಾರಾಜನೆ!

ಅಧೈರ್ಯದಿಂದ ಚಿಂತಿಸುವುದುವೀರರಕೆಲಸವಲ್ಲ!

ಮಹಾಮೋಹ—ಮಿತ್ರನೆ! ಮಂತ್ರಿಗಳವೀರಾಲಾಪಕ್ಕೆಮರುಳಾದೆನು

ಪಾರಿಪಾರ್ಶ್ವಕ—ಮಹಾರಾಜನೆ ! ನಿನ್ನಮಂತ್ರಿಗಳು ನಿನ್ನಬಳಿ

ಯಲ್ಲಿವ್ಯಾಗಮಾತ್ರ ಪರಾಕ್ರಮಿಗಳೇ ಹೊರತು, ವಿವೇಕನಪರಿವಾರದಲ್ಲಿಯಾಗಲಿ, ವಿಷ್ಣುಭಕ್ತನಲ್ಲಿಯಾಗಲಿ, ಏನನ್ನೂ ಮಾಡಲಾರರು.

ದ್ವಾರಪಾಲಕ—ಮಹಾರಾಜನಿಗೆ ಮಂಗಳವಾಗಲಿ. ಕಾಮಾದಿ ಮಂತ್ರಿಗಳು ಬಂದಿರುವರು.

ಮಹಾಮೋಹ—ಒಳಗೆ ಬರಲಿ.

ದ್ವಾರ—ಅಪ್ಪಣೆ(ಹೋಗುವನು,ಆರುಮಂತ್ರಿಮಂತ್ರಿಗಳೂಬರುವರು)

ಕಾಮಾದಿ ಮಂತ್ರಿಗಳು—ಮಹಾರಾಜನೇ! ವಂದಿಸುವೆವು.

ಮೋಹ—ಮಂತ್ರಿಗಳೇ! ಆಸನಗಳಲ್ಲಿ ಕುಳಿತುಕೊಳ್ಳಿರಿ.

ಆರುಮಂದಿಯೂ ಕುಳಿತುಕೊಳ್ಳುವರು.

ಮೋಹ—ಎಲೈಕಾಮನೆ! ನಿಯೋಗಿಸಿದ್ದಕಾರ್ಯವನ್ನು ಸಾಧಿಸಿದೆಯಾ?

ಕಾಮ—(ಲಜ್ಜೆಯಿಂದ)! ಮಹಾರಾಜನೆ! ನನಗೆ ಸಹಜವೂ ಶಕ್ತವಾಗಿಯೂ ಇದ್ದ ಎಲ್ಲ ಅಸ್ತ್ರಗಳನ್ನೂ ಬುದ್ಧಿಯನ್ನೂ ಮೊದಲು ವಿಷ್ಣುಭಕ್ತನಲ್ಲಿಯೂ ಆ ಬಳಿಕ ಪ್ರಜ್ಞೆಯಲ್ಲಿಯೂ ಉಪಯೋಗಿಸಿದೆನು. ದೈವಯೋಗದಿಂದ ಅವುಗಳೆಲ್ಲವೂ ಅವರಿಬ್ಬರೂ ಸಮೀಪವರ್ತಿಗಳಾಗುವಂತೆ ಪರಿಣಮಿಸಿದವು. ಆ ಸಮಯದಲ್ಲಿ ವಸ್ತುವಿಚಾರನಿಗೂ ನನಗೂ ಆದ ಯುದ್ಧದಲ್ಲಿ ನಾನು ಅತ್ಯಂತ ಶ್ರಾಂತನಾಗಿ ಬರಬೇಕಾಯಿತು. ಇಂದಿನವರೆಗೆ ಅಪಜಯವೆಂದರೇನೆಂಬುದನ್ನೇ ಅರಿಯದಿದ್ದ ನಾನು ಹೀಗೆ ಕಂಗೆಟ್ಟು ಬಂದುದು ದೈವವಿಲಾಸವಲ್ಲದೆ ನನ್ನ ಯತ್ನವಲ್ಲ. (ಸುಮ್ಮನಾಗುವನು.)

ಮೋಹ—ಎಲೈ ಕ್ರೋಧನೆ! ಕಾಮನ ವಾಕ್ಯದಿಂದ ಸ್ಪಷ್ಟವಾಗಲಿಲ್ಲ. ನೀನಾದರೂ ವಿವರಿಸು.

ಕ್ರೋಧ—(ಎದ್ದುನಿಂತು)

ರಾಗ|| ಬೇಗಡೆ|| ಚಾಪು|| (ಭಾವನೆನಿನ್ನ ಸಂಭಾವನೆ)

ಬದುಕಿಬಂದೆನು ಭೂಮಿಯೊಂದ್ರನೆ || ಪ || ಸದಯ ನಿನ್ನಯ ಕೃಪೆಯಿಂದ ನಾನೀದಿನ || ಅ || ಶೂರನಾಗಿಹನಾತನು | ಧೀರ ಶಾಂತನೊಡನೆ | ಯಾರೂಮಾಡದೆಯುದ್ಧ | ಘೋರಯುದ್ಧವ ಮಾಡಿ || ೧ || ಪೇಳಲಾರೆನುಕಷ್ಟ | ತಾಳಲಾರೆನುಭೂಪ | ಮೌಳಿಯೆ ಡಂಭನಕೇಳೆ ಸ್ಪಷ್ಟಮಹುದು || ೨ ||

ಮೋಹ—ಏನು ಏನು ? ಶಾಂತನೊಡನೆ ಹೋರಾಟವೆ? ಹೇಗೆ? ಎಲ್ಲಿ? ಪರಿಣಾಮವೇನಾಯಿತು ?

ಕ್ರೋಧ—ಜೀಯ ! ಅಪ್ಪಣೆಯನ್ನು ಪಡೆದು ಹೋದ ನಾನು ಡಂಭ ನೊಡನೆ ಕೂಡಿ, ವಸಿಷ್ಠರ ಆಶ್ರಮದಲ್ಲಿ ವಿಷ್ಣುಭಕ್ತನಿದ್ದುದನ್ನು ತಿಳಿದು ವಸಿಷ್ಠರ ವನವನ್ನು ಭಂಗಪಡಿಸುತ್ತಿದ್ದೆನು. ನಮ್ಮನ್ನು ನಿಗ್ರಹಿಸಲು ಬಂದ ವಿಷ್ಣು ಭಕ್ತನಿಗೆ ಸಿಕ್ಕದೆ ಮಿಥಿಲಾಪಟ್ಟಣದ ಉಪವನಕ್ಕೆ ಬಂದು ಸೇರಿದೆನು. ಅಲ್ಲಿ ನನಗೂ ಶಾಂತನಿಗೂ ನಡೆದ ಯುದ್ಧದಲ್ಲಿ ನನಗೆ ದೈವವು ಪ್ರತಿಕೂಲವಾಯಿತು. ಇನ್ನು ನಾನು ಹೇಳಲಾರೆನು. (ಕುಳಿತುಕೊಳ್ಳುವನು)

ಮೋಹ—ಎಲೈ ಲೋಭನೆ ! ನೀನಾದರೂ ವಿಷಯವನ್ನು ಸ್ಪಷ್ಟ ಪಡಿಸು.

ಲೋಭ—ಪ್ರಭುವೆ, ಆಜ್ಞೆಯನ್ನು ಶಿರಸಾವಹಿಸಿ ಮಧುರಾಪಟ್ಟಣಕ್ಕೆ ಹೋದೆನು. ಅಲ್ಲಿಂದ ವಿಷ್ಣುಭಕ್ತನು ಹೊರಟುಹೋದನೆಂಬುದನ್ನು ಹುಡು ಕುತ್ತ ಮಿಥಿಲಾಪಟ್ಟಣವನ್ನು ಸೇರಿದನು. ಅಲ್ಲಿ ಕಾಮಕ್ರೋಧರು ಜಿತರಾದ

ಮೇಲೆ ನನಗೂ ಸಂತೋಷನಿಗೂ ಯುದ್ಧಕ್ಕೆ ಆರಂಭವಾಯಿತು, ಆಗ ನಾನು ಸಂತೋಷನನ್ನು ಕುರಿತ. ಹೀಗೆ ಹೇಳಿದೆನು.

ಕಂದ|| ಮದಜಲದಿಂ ನೆರೆಯುತ್ತಿಹ |
ಮದಗಜನಿಕರದಿವೆದಿರೆ ನಾಂ ಧರೆಯೊಳಗೆ |
ಪದಜವದಿಂದ ಸೀನತಾಂ |
ಸದೆಯು ವಾಜಿಯಪಡೆದಿಹನಿಜದಿಂನುಡಿವೆಂ ||

||ಮತ್ತು||

ಕಂದ|| ಉತ್ತಮವಾಜಿಯಕೋರುತ |
ಮತ್ತದುಲಭಿಸಲ್ ಬಯಸುವೆ ನದರಿಂದಧಿಕಂ |
ಮತ್ತತೆವೊಂದಿಹವಾನವ |
ಚಿತ್ತತ್ತಲಿಹರೆನುತಾಂ ಪರೀಕ್ಷಿಸು ತಿರ್ಪೆಂ ||

ಹೀಗೆಂದು ನನ್ನ ಶಕ್ತಿಯನ್ನು ಪ್ರಕಾಶಪಡಿಸಿದೆನು.

ಮೋಹ—(ತಲೆದೂಗುತ್ತ) ಅದಕ್ಕೆ ಸಂತೋಷನು ಹೇಳಿದುದೇನು ?

ಲೋಭ—ಮಹಾರಾಜನೆ! ಅದಕ್ಕಾತನು ನಗುತ್ತಾ—

ಕಂದ|| ಕೃಪಣನೆನಿಸಿನ್ನೀಚರಿತೆಯು |
ಉಪವಾಸಕರಮೆನುತಾನೆಣಿಪೆಕೇಳ್ ಸತತಂ |
ತಪಮಂಮಾಡುವತೆರದಿಂ |
ಉಪಸರಮಾಡುತೆಧನಿಕರನಾಶ್ರಯಿಸು ವೆಧೀ||

||ಮತ್ತು||

ಭಗವತ್ಕೃಪಾದತ್ತಮಾದ ಶೀತಲೋದಕವೂ ಸುಸ್ವಾದಫಲಗಳೂ ಲಭಿಸಿದ್ದರೂ ಅದನ್ನು ಸೇವಿಸದೆ ಖೇದಪಡುವವನು ನೀನೋರ್ವನೆ.—

ಹೀಗೆ ನನ್ನನ್ನು ನಿಂದಿಸಿದನು.

ಮೋಹ— ಸರಿಯಾಗಿಯೇ ಹೇಳಿದನು. ಆಮೇಲೆ ?

ಲೋಭ— ಆತನ ಮಾತನ್ನು ಕೇಳಿ ಕೋಪದಿಂದ ನಾನು—

ಕಂದ|| ಧನಮಂ ಗಳಿಸಿದಮನುಜಂ |
ವನಮಂಸೇರುವುದದೇಕೆ ಪುರುಷಾರ್ಥಂಮೇಣ್ |
ವನಿತಾಮಣಿವಶಮಾಗಿರೆ |
ಧನಮುಹಿಮರ್ತನ್ನ ಕರಹರೆಂಬುದುಪುಸಿಯೊ ||

ಹೀಗೆಂದು ನಾನು ಆತನನ್ನು ಚೆನ್ನಾಗಿ ಧಿಕ್ಕರಿಸಿದೆನು.

ಮೋಹ— || ತನ್ನಲ್ಲಿ || ಈ ಲೋಭನು ತನ್ನ ಸ್ವಭಾವಕ್ಕೆ ಸರಿಯಾಗಿ ಹೇಳಿದನು. ಇರಲಿ. (ಪ್ರಕಾಶ) ಆಮೇಲೆ ?

ಲೋಭ— ನನ್ನೀ ಧಿಕ್ಕಾರವನ್ನು ಕೇಳಿ ಆತನು ಸಮಾಧಾನದಿಂದಲೆ ನನ್ನನ್ನು ಕುರಿತು “ ಧನವನ್ನೇ ನಂಬಿರುವ ಕೃಪಣನೇ ! ಧನಪಿಪಾಸೆಯೆಂಬ ಘೋರಪಿಶಾಚಗ್ರಸ್ತನಾದ ನೀನು ಘನತರವಾದ ಲೋಭಾಂಧಃತಮಸ್ಸಿನಲ್ಲಿ ಸಿಕ್ಕಿ ತೊಳಲುತ್ತಿರುವೆ. ಈ ಧನ ಪಿಶಾಚವು ನಿನ್ನನ್ನು ಕೊಂದು ತಿನ್ನುವುದೇ ನಿಜ.” ಹೀಗೆ ನನ್ನನ್ನು ವಾಗ್ಬಾಣದಿಂದ ಇರಿದನು.

ಮೋಹ— || ತನ್ನಲ್ಲಿಯೇ || ಭಲೆ ! ಸಂತೋಷನು ಚೆನ್ನಾಗಿ ಹೇಳಿದನು. ಇಷ್ಟರಿಂದಲೇ ಲೋಭನು ತಗ್ಗುವುದು ಮಾತ್ರ ಅನುಮಾನ, ಇರಲಿ. || ಪ್ರಕಾಶ || ಆಮೇಲೆ ?

ಲೋಭ— ಸಂತೋಷನಮಾತಿಗೆ ನಾನು ಕೋಪೋದ್ರೇಕದಿಂ “ಎಲೈ ವಿಚಾರಶೂನ್ಯನೆ ! ಧನಹೀನನಾದವನು ಸುಖಬಾಹಿರನೂ ಘನವಿಲ್ಲದವನೂ ಆಗಿ ಕಡೆಗೆ ‘ ಹಣವಿಲ್ಲದವ ಹೆಣಕ್ಕೂ ಕಡೆ ’ ಯೆಂಬಂತೆ ವ

ಥೇವಾಗಿ ಬುದುಕಿ ಸಾಯುವನು, " ಹೀಗೆ ಆತನ ಗರ್ವಭಂಗವಾಗುವಂತೆ ಹೇಳಿದೆನು.

ಮೋಹ—||ತನ್ನಲ್ಲಿ||! ಇಷ್ಟಕ್ಕೇ ತಗ್ಗುವನಾದರೆ ಆತನು ಸಂತೊಷನೆನ್ನಿಸುತ್ತಿರಲಿಲ್ಲ. || ಪ್ರಕಾಶ || ಆಯಿತು, ಮುಂದೆ ?

ಲೋಭ—ನನ್ನ ಮಾತಿಗೆ ಕೋಪಿಸುವುದನ್ನು ಬಿಟ್ಟು ಕಿರುನಗೆಯಿಂದಲೇ ಆತನು ಎಲಾ"ಮೂರ್ಖನೆ! ಅಸ್ಥಿರವೂ ದುಃಖಕ್ಕಾಕರವೂ ಆದ ಧನವು, ತನ್ನ ಪತ್ನಿಯನ್ನು ಪರಪುರುಷರ ವಶಮಾಡುವುದಕ್ಕೂ ಹಿಂತೆಗೆಯದು' ತೃಷ್ಣೆಯಮೂಲಕ ಡಂಭನ ಪ್ರಸನ್ನತೆಯನ್ನು ಬಯಸಿದ ನಿನಗೀ ಪೌರುಷವೂ ಈ ಪಂಥವೂ ಏಕೆ ? ನಮ್ಮ ವಿಷ್ಣುಭಕ್ತನ ನೆರಳನ್ನಾದರೂ ನೀನು ಹಿಡಿಯಲಾರೆ. ನಿಲ್ಲು, ನಿನ್ನನ್ನಿಲ್ಲಿಯೇ ಪೂರೈಯಿಸುವೆನು ?" ಹೀಗೆಂದು ನನ್ನನ್ನು ಕ್ರೂರತರವಾಕ್ಯಲ್ಕದಿಂದ ಮರ್ಮಾಹತನಾಗುವಂತೆ ಮಾಡಿದನು. ಮಹಾರಾಜನೆ! ನಾನಾವ್ರಣದಯಾತನೆಯನ್ನು ತಡೆಯಲಾರೆನು. (ಕುಳಿತುಕೊಳ್ಳುವನು)

ಮೋಹ—|| ತನ್ನಲ್ಲಿ || ಈ ಲೋಭನು, ಈವರೆಗೆ ಯಾರಿಂದಲೂ ತಾನು ಜಿತನಾದೆನೆಂದು ಹೇಳಿದವನಲ್ಲ ; ಆದರೆ, ಈಗ ಹೀಗೆ ಹೇಳಲು ಕಾರಣವೇನು ? (ಯೋಚಿಸಿ ತಲೆದೂಗುತ್ತ) ತಿಳಿದೆನು, ಹೊಸದಾಗಿ ಸಂಪಾದಿಸಿದ ಡಂಭನ ಸಂಬಂಧವೇ ಸರಿ ! ಈ ಲೋಭನ ಮನೋಭಾವವನ್ನು ನೋಡಿದರೆ ತನ್ನ ಅಂತಸ್ತಾಪವೆಲ್ಲವನ್ನೂ ವಿಷ್ಣುಭಕ್ತನಲ್ಲಿ ಪ್ರಯೋಗಿಸಿ ನಿಗ್ರಹಿಸಲು ಪ್ರಯತ್ನಪಡುವಂತೆ ತೋರುವುದು. ಇರಲಿ, ಮುಂದೆ ತಿಳಿಯುವೆನು.

||ಪ್ರಕಾಶ|| ಎಲೈ ಡಂಭನೆ ! ಕುಶಲದಿಂದಿರುವೆಯಷ್ಟೆ ?

ಡಂಭ—(ಎದ್ದುನಿಂತು) ಮಹಾರಾಜನೆ ! ನಾನು ಅವುದರಲ್ಲಿಯೂ

ಕುಂದಣಿಸುವವನಲ್ಲವಾಗಿ ನನ್ನ ಕುಶಲತೆಗೆ ಕೊರತೆಯೇನು?

ಮೋಹ—ಸಂತೋಷವೇಸರಿ. ಸಂಗತಿಯನ್ನು ನೀನಾದರೂ ಸ್ಪಷ್ಟ ಪಡಿಸು.

ಡಂಭ—ಮಹಾರಾಜನೆ! ಕ್ರೋಧನಿಂದೊಡಗೂಡಿದನಾನು ವಸಿಷ್ಠಾಶ್ರಮದಲ್ಲಿದ್ದ ವಿಷ್ಣುಭಕ್ತನನ್ನು ಉಪಾಯದಿಂದ ಮಿಥಿಲೋದ್ಯಾನಮಧ್ಯವರ್ತಿಯನ್ನಾಗಿ ಮಾಡಿದೆನು.

ಮೋಹ—(ನಗುತ್ತ) ತುಂಬಾ ಸಾಹಸವೇ ಆಯಿತು, ಆ ಬಳಿಕ!

ಡಂಭ—ಆಕಾಲಕ್ಕೆ ಸರಿಯಾಗಿ ಸುಶೀಲೆಯೊಡನೆ ಪ್ರಜ್ಞೆಯು ಉದ್ಯಾನಕ್ಕೆ ಬಂದಳು. ಅವಳನ್ನು ನೋಡಿ ಕಾಮ, ಕ್ರೋಧ, ಲೋಭರು ಉದ್ಯಾನವನ್ನು ಪ್ರವೇಶಿಸಲು ಪ್ರಯತ್ನಿಸಿದರು. ಅವರನ್ನು ವಸ್ತುವಿಚಾರ, ಶಾಂತ್ಯಸಂತೋಷರು ಪ್ರತಿಭಟಿಸಿ, ಜಯವನ್ನು ಹೊಂದಿದರು.

ಮೋಹ—ಈ ವಿಚಾರವನ್ನೆಲ್ಲವನ್ನು ಮೊದಲೇ ತಿಳಿದಿದ್ದೆನು. ಆಗ ನೀನೆಲ್ಲಿ-ಏನು ಮಾಡುತ್ತಿದ್ದೆ?

ಡಂಭ—ನಾನು ಕಾಮ, ಕ್ರೋಧ, ಲೋಭರ ಮೇಲಿನ ಮಮತೆಯಿಂದ ಶತ್ರುಗಳಿಗೆ ಗೋಚರನಾಗದೆ ಮರೆಯಲ್ಲಿ ನೋಡುತ್ತಿದ್ದೆನು.

ಮೋಹ—ಮತ್ತೂ ಸಾಹಸವೇ ಆಯಿತು. ಅಮೇಲೆ ಹೇಳು.

ಡಂಭ—ಆಬಳಿಕ, ವಿಷ್ಣುಭಕ್ತನ ನೆಲೆಯರಿತು ಪ್ರಜ್ಞೆಯು ಅಂತಃಪುರಕ್ಕೆ ತೆರಳಿದಳು. ಹಿಂದೆಯೇ ಶಾಂತಾದಿಗಳೂ ಹೋದರು. ನಾನು ಕ್ರೋಧ, ಕಾಮ, ಲೋಭರನ್ನು ಮಾತ್ಸರ್ಯ ಅಹಂಕಾರರ ಸಹಾಯದಿಂದ ಸಂಕೈಸಿಕರೆದು ಕೊಂಡು ಬಂದೆನು.

ಮೋಹ—॥ ತನ್ನಲ್ಲಿ ॥ ಇವನ ಮಾತಿನಿಂದ ಇವನು ಕೇವಲ ವಾಗ್ಜೀ

ವಿಯೆಂದೂ ಇವನು ಧರಿಸಿರುವ ಆಯುಧಗಳು ಭಾರಭೂತವೆಂದೂ ಕತಿಯ್ಯ ಬೇಕಾಗಿದೆ. ||ಪ್ರಕಾಶ||

ಎಲೈ ಡಂಭನೆ ! ಶಸ್ತ್ರಧಾರಿಯಾದ ನಿನಗೆ ಕಾಮಾದಿಗಳಮೇಲಿನ ಮಮತೆಗಿಂತಲೂ ಶಾಂತಾದಿಗಳಮೇಲೆ ದ್ವೇಷವು ಹೆಚ್ಚಾಗಿರಬೇಕಲ್ಲವೆ

ಡಂಭ—ಆಹುದು, ಮಹಾರಾಜನೆ ! ಆದರೂ ದ್ವೇಷವು ಸಾಧಿಸ ತಕ್ಕುದೇ ಹೊರತು ದುಡುಕತಕ್ಕದಲ್ಲ. ಸಮಯವನ್ನು ನೋಡಿ ನಿಜವಾದ ವಿಷ್ಣುಭಕ್ತನನ್ನು ನಿಗ್ರಹಿಸಬೇಕಲ್ಲದೆ ಅವನಿಗೆ ಆಶ್ರಿತರಾದ ಶಾಂತಾದಿಗಳನು ಜಯಿಸಿ ಫಲವಿಲ್ಲವೆಂದು ಭಾವಿಸಿ ಬಿಟ್ಟುಬಿಟ್ಟೆನು.

ಮೋಹ—ಎಲೈ ಡಂಭನೆ ! ಕರುವನ್ನು ಎಳೆದರೆ ಹಸುವೂ ಬರುವಂತೆ, ಶಾಂತಾದಿಗಳನ್ನು ಹಿಡಿದರೆ ವಿಷ್ಣು ಭಕ್ತನು ತಾನೇ ಬರುತ್ತಿದ್ದನೆಂದು ತಿಳಿಯಲಿಲ್ಲವೇಕೆ ?

ಡಂಭ—ಮಹಾರಾಜನೆ ! ವಿಷ್ಣುಭಕ್ತನು ಮೌನದಲ್ಲಿದ್ದುದರಿಂದ ಅಷ್ಟುದೂರ ಆಲೋಚಿಸಲಿಲ್ಲ. ಅಲ್ಲದೆ, ಅಷ್ಟರಲ್ಲಿಯೇ ಸಖಿಯರೊಡನೆ ವನ ವಿಹಾರಕ್ಕೆ ಒಂದ ಶಾಂತಾಮಣಿಯನ್ನು ನೋಡುತ್ತ ನಿಂತಿದ್ದೆನು. ಈಗ ಅಪ್ಪ ಣೆಯಾದರೆ ಶಾಂತನಿಗೆ ನನ್ನ ಶೌರ್ಯವನ್ನು ತೋರುವೆನು.

ಮೋಹ—ಎಲೈ ಡಂಭನೆ ! ಪ್ರತ್ಯಕ್ಷವಾಗಿ ನಾನು ಪ್ರವರ್ತಿಸದಿದ್ದ ರೂ ಹೊರಗೆ ಸಂಚರಿಸಲು ನಾಚುತ್ತಿರುವೆನು. ಹೀಗಿರುವಲ್ಲಿ ಮಂತ್ರಿಗಳಾದ ನೀವು ಪರಾಜಿತರಾಗಿ ಬಂದೂ, ಮತ್ತೆಯೂ ಮುಖವನ್ನೆತ್ತಿಕೊಂಡು ಹೋ ಗುವೆನೆಂದು ಹೇಗೆ ಹೇಳುವಿರೋ ಆಶ್ಚರ್ಯ !

ಡಂಭ—ಮಹಾರಾಜನೆ ! ನಾನು ಯುದ್ಧದಲ್ಲಿ ಉದಾಸೀನನಾ ಬಿಟ್ಟುದರಿಂದ ಅವರು ಬದುಕಿದರೇ ಹೊರತು, ನಾನು ಆಯುಧಪಾಣಿಯಾಗಿ

ಯುದ್ಧಕ್ಕೆ ನಿಂತಿದ್ದರೆ ಅವರು ಉಳಿಯುತ್ತಿರಲಿಲ್ಲ

ಮೋಹ—ಡಂಭನೆ ! ಈವರೆಗೆ ಅನುಭವಿಸಿದ ಪರಿಭವವನ್ನು ಅಪಮಾನವೆಂದೆಣಿಸದೆ ಹೀಗೆ ಹೇಳಿಕೊಳ್ಳುತ್ತಿರುವುದು ಆತ್ಮಸ್ತುತಿಯೆನ್ನಿಸದೆ ?

ಡಂಭ—ಮಹಾರಾಜನೆ ! ಇದು ಆತ್ಮಸ್ತುತಿಯಲ್ಲ. ಇರಲಿ, ಪ್ರಜ್ಞೆಗೆ ಸ್ವಯಂವರವೆಂದು ಲಗ್ನಪತ್ರಿಕೆ ಬಂದಿರುವುದಷ್ಟೆ ? ಸ್ವಯಂವರಕ್ಕೆ ರಾಜರೂ ರಾಜಪುತ್ರರೂ ಹೋಗುವುದು ಸಹಜವಾಗಿದೆ. ನೆರೆದ ಸಭಾಮಧ್ಯದಲ್ಲಿ ಸಾರ್ವಭೌಮನಾದ ನಿನ್ನನ್ನೂ ನನ್ನನ್ನೂ ಕಾಮನನ್ನೂ ನೋಡಿದರೆ ಪ್ರಜ್ಞೆಯು ವಿಷ್ಣುಭಕ್ತನನ್ನು ವರಿಸುವಳೆ ? ಇಲ್ಲ ! ಇಲ್ಲ !! ಇಲ್ಲ !!!

ಮೋಹ—ಡಂಭನೆ ! ನೆರೆದ ಸಭಾಮಧ್ಯದಲ್ಲಿ ಹೆಂಗಸಿನಿಂದಲೂ ಅವಮಾನವನ್ನು ಹೊಂದಬೇಕೆನ್ನುವೆಯಾ ?

ಡಂಭ—ಮಹಾರಾಜನೆ ! ಧೀರರಿಗೆ ಅವಮಾನವೆಂದರೇನು ? ಒಂದು ವೇಳೆ ಏನಾದರೂ ಬಂದರೆ ಕೃಷ್ಣನು ರುಕ್ಮಿಣಿಯನ್ನು ಅಪಹರಿಸಿದಂತೆ ಪ್ರಜ್ಞೆಯನ್ನು ಅಪಹರಿಸಬಹುದು

ಮೋಹ—॥ ತನ್ನಲ್ಲಿ ॥ ಕಾಮ, ಕ್ರೋಧ, ಲೋಭ, ಡಂಭ, ಅಹಂಕಾರ, ಮಾತ್ಸರ್ಯರೆಂಬ ಷಡ್ವರ್ಗಗಳನ್ನೂ ಇವರಿಗೆ ದೊರೆಯಾದ ನನ್ನನ್ನೂ ಜಯಿಸಲು ಶಕ್ತರಾದ ಶಾಂತ, ವಸ್ತುವಿಚಾರ, ಸಂತೋಷರಿಂದ ಕೂಡಿದ ವಿವೇಕನು ಸಾರ್ವಭೌಮನೆನಿಸುವನು. ಆತನು ಸುಶೀಲೆಯಿಂದ ಪ್ರಜ್ಞೆಯನ್ನು ಪಡೆದಿರುವನು. ಆ ಪ್ರಜ್ಞೆಗೆ ಶಾಂತಿ, ಧೃತಿ ಎಂಬುವರು ಸಹಚಾರಿಣೀಸಖಿಯರಾಗಿರುವರು. ಇಂತಹ ಪ್ರಜ್ಞೆ, ನಮ್ಮ ವಶಳಾಗುವಳೆಂದಾಗಲಿ, ಇಲ್ಲವೆ ಅಪಹರಿಸುವೆನೆಂದಾಗಲಿ ನಮ್ಮ ಡಂಭನು ಯೋಚಿಸಿರುವನು ಇರಲಿ.

॥ ಪ್ರಕಾಶ ॥

ಕಂ|| ಡಂಬಪ್ರಜ್ಞಾಮಣಿಯಂ|
ಕುಂಭಸ್ತನಿತೃಷ್ಣೆಯಂತೆಮನದೊಳ್ ತಿಳಿದೈ
ಅಂಬುಜಮುಖಿಯಂಮುಟ್ಟಲ್ |
ಶಂಭುವಿಗಾದೊಡಮಶಕ್ಯಮೆಂದರಿಮೂಢಾ ||

ಡಂಭ—ಮಹಾರಾಜನೆ! ಇದು ವಿಚಾರಕ್ಕೆ ಸಮಯವಲ್ಲ, ಮುಂದೆ ಸ್ಪಷ್ಟವಾಗುವುದು. ಮೊದಲು ಪ್ರಯಾಣ ಸನ್ನಾಹಮಾಡಬಹುದು.

ಮೋಹ—ಡಂಭನೆ! ನಿನ್ನ ಉತ್ಸಾಹವನ್ನು ಏಕೆ ಭಂಗಪಡಿಸಲಿ ನಾನು ಪಯಣಕ್ಕೆ ಸಿದ್ಧನಾಗಿರುವೆನು. (ಎದ್ದುನಿಲ್ಲುವನು)

(ಡಂಭ, ಕಾಮ, ಕ್ರೋಧ, ಲೋಭ, ಅಹಂಕಾರ, ಮಾತ್ಸರ್ಯರೂ ಎದ್ದು ನಿಲ್ಲುವರು)

ಪಾರಿಪಾರ್ಶ್ವಕ—|| ತನ್ನಲ್ಲಿ || ನಮ್ಮ ರಾಜನಿಗೆ ಹಿಂದೆ ನಡೆದುದು ಮರೆತುಹೋಗುವುದು. ಮುಂದೆ ನಡೆಯುವುದು ಆಲೋಚನೆಗೆ ಬರಲಾರದು. ತನ್ನ ಸಹಚರರೊಡನೆ ಹೊರಡಲು ಸಿದ್ಧನಾದನು. ಈ ರಾಜನನ್ನು ಪ್ರಜ್ಞೆವರಿಸಿದರೂ ಇಲ್ಲವೆ ರಾಜನೇ ಪ್ರಜ್ಞೆಯನ್ನು ವರಿಸಿದರೂ ಪರಿವಾರದೊಡನೆ ಅಲ್ಲಿಯೇ ಐಕ್ಯನಾಗುವನು. ಆಗಲಿ, ಅದಕ್ಕನುಗುಣವಾಗಿಯೇ ಹರಸುವೆನು.

|| ಪ್ರಕಾಶ || ರಾಜನೆ ಪರಿವಾರದೊಡನೆ ಅಭ್ಯುದಿತನಾಗು.

ಮೋಹ—ಮಿತ್ರನೆ! ನೀನು ಜೊತೆಯಲ್ಲಿ ಬರುವುದಿಲ್ಲವೆ?

ಪಾರಿ—ಮಿತ್ರನೆ! ನೀನು ನಿನ್ನ ಅಭಿವೃದ್ಧಿಯನ್ನರಿಯದವನಾದುದರಿಂದ ಪ್ರಜ್ಞೆಯನ್ನು ಹುಡುಕುತ್ತಿರುವೆ! ನಾನೂಬಂದು ನಿಮ್ಮ ಸಹವಾಸವನ್ನು ತಪ್ಪಿಸಿಕೊಳ್ಳಲೆ? ಮನೆಯಲ್ಲಿರುವ ತ್ರಿಪುರಸುಂದರಿಯೇ ಸಾಕು. ನಾನಿನ್ನು ಹೊರಡುವೆನು. (ಹೋಗುವನು.)

ಮೋಹ—ಮಂತ್ರಿಗಳೆ! ನಾವಿನ್ನು ಹೊರಡುವ ಬನ್ನಿರಿ.
(ಹೋಗುವರು)

(ಮಿಥಿಲಾನಗರದ ರಾಜಬೀದಿಯಲ್ಲಿ ಸಪರಿವಾರನಾದ ಮೋಹನ ಪ್ರವೇಶ)

ಡಂಭ—ಮಹಾರಾಜನೆ! ಇದೇ ಮಿಥಿಲಾಪಟ್ಟಣದ ರಾಜಬೀದಿ.

(ತೆರೆಯಲ್ಲಿ ಡಂಗುರದ ಶಬ್ದವಾಗುವುದು)

ಡಂಭ—ಮಹಾರಾಜನೆ! ಲಾಲಿಸಬೇಕು. ದಂಡಿಯು ಸಾರುತ್ತ ಬರುವನು ; ನಾವು ನಾಲ್ವರೂ ಸ್ವಲ್ಪ ಮರೆಯಾಗಿದ್ದರೆ ವಿಚಾರವೆಲ್ಲವೂ ತಿಳಿದು ಬರುವುದು.

ಮೋಹ—ಆಗಬಹುದು. (ಎಲ್ಲರೂ ಹೊರಡುವರು.)

(ದಂಡಿಯ ಪ್ರವೇಶ)

ದಂಡಿ— ರಾಗಾ|| ನೋಟ್|| (ಯನಗ್ಯಾರೇನಾದರೂಸರಿಯೆ)

ಎಸಂಥ ದಂಡಿಯರಿನ್ನಿಲ್ಲ - ಕೇಳಿರಿ ಜನರೆಲ್ಲ ॥ ಪ ॥

ಇಚ್ಛೆಯಲಿ ಕುಡಿದೆನು ನಾ ಹೆಚ್ಚಾಗಿ ಸಾರಾಯಿ । ಲೊಚ್ಚೆಯು ಹಾಕುತಲಿ ಸೊರ್‍ರೆಂದು ಸೀಸೆಯುಬಾಯು - ಬಿಚ್ಚಿ, ಸೀಸೆಯನ್ನೊ ಬಲ್ ಮೆಚ್ಚಿಸೋಯೆನೆನಾನು ನಿಚ್ಚವುನಲಿಯುವೆನಿನ್ನು ॥ ೧ ॥

ಭಂಗಿಯುತಾಂ ಭಂಗಾರವ ಮಾರುವ ವ್ಯೋಲ್ ಮಾರಾಟ|ಹ್ಯಾಂಗಿದ್ದರೂ ಕೊಡಿ ನಮ್ಮಪ್ಪ | ನಾ ಮೆಚ್ಚಿದೆ ನಮ್ಮಹಾಂಗೇ ಮಾರಾಯಾಕೊಟ್ಟನು ಗುಂಗುಂ ಎಂದ್ಹೀರಿವನಪ್ಪ । ಹೆಗೇಳಪ್ಪಪ್ಪ ಭಂಗಿಯುಸಮವಿಲ್ಲಪ್ಪ । ನಂಗಿದು ಕುಲದೇವತೆಯುಪ್ಪ ॥ ೨ ॥

(ಮೃದಂಗವನ್ನು ಬಾರಿಸುತ್ತ ಸುತ್ತಲೂ ನೋಡಿ)

ಎಲ್ಲರೂ ಕೇಳತಕ್ಕದ್ದು, ಈದಿವ್ಸ ನಮ್ಮ ಮಾರಾಜನ ಪುತ್ರಿ ಸ್ವಯಂವರವಾಗ್ತದೆ. ಎಲ್ಲಾರಾಜುರ‍್ರು ರಾಜಪುತ್ರುರ‍್ರು ಸಭ್ಗೆ ಬರ್‍ಬೇಕಂತ ಕೇಳ್ತದೆ.

ಭೂರಿದಕ್ಷಿಣೆ ಬೇಕಾದ್ರೆ ಜಾಸ್ತೀಲೂ ಬನ್ನ್ಬಿಯ್ದೂ (ಕೂಗುತ್ತ ಹೋಗುವನು)

(ಮೋಹನು ಪರಿವಾರದೊಡನೆ ಮುಂದೆ ಬರುವನು.)

ಮೋಹ—ಮಂತ್ರಿಗಳಿರಾ ! ದಂಡಿಯ ಮಾತಿನಿಂದೆಲ್ಲವೂ ಗೊತ್ತಾಯಿತಷ್ಟೆ. ಇನ್ನು ಸ್ವಯಂವರ ಮಂಟಪಕ್ಕೆ ಹೊರಡಬಹುದೊ ?

(ತೆರೆಯಕಡೆ ಮೃದಂಗವಾದ್ಯಗಳಾಗುವುವು.)

ಡಂಭ—(ಸಂಭ್ರಮದಿಂದ) ಮಹಾರಾಜನೆ ! ಇದೊ ಇದೋ ಏಳಿಸಬೇಕು. ಸ್ವಯಂವರಮಂಟಪಕ್ಕೆ ಎಲ್ಲರೂ ಬರಬೇಕೆಂದು ಸೂಚಿಸುವ ಮೃದಂಗವಾದ್ಯಗಳಾಗುತ್ತಿರುವುವು. ಇನ್ನು ವಿಳಂಬಿಸಿದರೆ ಕಾರ್ಯವು ಕೆಡುವುದು.

ಮೋಹ—ಬೇಗಹೊರಡಿರಿ. (ಹೋಗುವರು.)

ಸ್ವಯಂವರ ಮಂಟಪ.

(ರಾಜರೂ ರಾಜಪುತ್ರರೂ ಆಸನಾಸೀನರಾಗಿರುವರು. ವಸ್ತುವಿಚಾರನೊಡನೆ ವಿವೇಕನು ಕುಳ್ಳಿರುವನು. ಮಂತ್ರಿಗಳೊಡನೆ ಮೋಹನು ಪ್ರವೇಶಿಸುವನು.)

ವಿವೇಕ—(ಎದ್ದು ಮುಂದೆಬಂದು) ಮಹಾರಾಜನೆ ! ಸುಖಾಗಮನವೆ ! ಪೀಠವನ್ನಲಂಕರಿಸಬೇಕು. (ವಸ್ತುವಿಚಾರನ ಮುಖವನ್ನು ನೋಡುವನು.)

ವಸ್ತು—(ವಿನೀತನಾಗಿ ಬಂದು) ಮೋಹನನ್ನು ವಿವೇಕನಿಗೆ ಎದುರಿಗೆಯ ಮೊದಲನೆಯ ಪೀಠದಲ್ಲಿ ಕುಳ್ಳಿರಿಸಿ, ಉಳಿದವರನ್ನು ಅವನ ಪಕ್ಕದಲ್ಲಿ ಸಾಲಾಗಿ ಕುಳ್ಳಿರಿಸುವನು.)

ದ್ವಾರ—ಪ್ರಭುವರೇಣ್ಯರಿಗೆ ವಿಜಯವು. ಪ್ರಧಾನಮಂತ್ರಿಗಳು ವಿಷ್ಣುಭಕ್ತರಾಜರನ್ನು ಕರತರುತ್ತಿರುವರು.

(ವಿವೇಕ—ಮಹಾಮೋಹರೇ ಮೊದಲಾಗಿ ಎಲ್ಲರೂ ಎದ್ದು ನಿಲ್ಲುವರು )

(ಶಾಂತ ಸಂತೋಷರೊಡನೆ ವಿಷ್ಣು ಭಕ್ತನು ಪ್ರವೇಶಿಸುವನು.)

ವಿಷ್ಣುಭಕ್ತ—(ವಿನೀತನಾಗಿ) ಪೂಜ್ಯರಿಗೆ ವಂದನೆ !

ವಿವೇಕ—ರಾಜಪುತ್ರನೆ ! ಮಂಗಳವಾಗಲಿ. (ಕೈಹಿಡಿದು ಬಲಗಡೆಯ ಮೊದಲನೆಯ ಪೀಠದಲ್ಲಿ ಕುಳ್ಳಿರಿಸಿ, ಶಾಂತಾದಿ ಮಂತ್ರಿಗಳನ್ನು ಸಾಲಾಗಿ ಕುಳ್ಳಿರುವಂತೆ ಸೂಚಿಸುವನು.)

(ತೆರೆಯಲ್ಲಿ)

ರಾಗ ||　　　　(ಸೋಜಾನೆ)

ಅಜ್ಞಾನತಮನಮಂಜಿಪ್ಪದಿ ಬೆಳಗುತ | ಸುಜ್ಞಾನಸುಸಕಾನಂದವನೆಸಗುತ || ಪ್ರಜ್ಞಾಂಬೆಯೇ ನೀ ಬಾರೆಂದೂ ಹಸೆಗೆ ಕರೆವರು || ೧ ||

ವಿವೇಕ—ಪುರೋಹಿತರೆಲ್ಲಿ ? ಇನ್ನೂ ಸಂಭಾರದೊಡನೆ ಬರಲಿಲ್ಲವೆ ?

ಸೇವಕ—ಇಲ್ಲಿಯೇ ಸಂಕಲ್ಪದಲ್ಲಿದ್ದರು, ಬರುತ್ತಿರುವರು.

ವಿವೇಕ—(ಎಲ್ಲರೊಡನೆ ಎದ್ದು ನಿಲ್ಲುವನು. ಶತಾನಂದನು ಶಿಷ್ಯನೊಡನೆ ಬರುವನು )

ವಿವೇಕ—ಗುರುಗಳಿಗೆ ವಂದನೆ. ಆಸನಗ್ರಹಣಮಾಡಬೇಕು.

ಶತಾನಂದ—ನೃಪಸ್ತೋಮಕ್ಕೆ ಸ್ವಸ್ತಿಯಾಗಲಿ. ಎಲ್ಲರೂ ಕುಳ್ಳಿರಬಹುದು. (ಕುಳಿತುಕೊಳ್ಳುವರು.)

ವಿವೇಕ—ಕೈಮುಗಿದು, ಪೂಜ್ಯರೆ! ರಾಜರೂ ರಾಜಪುತ್ರರೂ ಸಭಾಮಂಟಪವನ್ನಲಂಕರಿಸಿರುವರು. ಸುಕುಮಾರಿಯೂ ಅಲಂಕೃತೆಯಾಗಿ ಬಂದು ಅಂತರಪಟದ ಹಿಂದಿರುವಳು. ಈ ಸಭೆಯಲ್ಲಿರುವವರಲ್ಲಿ ಇಷ್ಟನಾದ ವರನಿಗೆ ಮಾಲೆಹಾಕುವಂತೆ ಸುಕುಮಾರಿಗೆ ತಾವು ಅನುಜ್ಞೆಯನ್ನು ಕೊಡಬೇಕು.

ಶತಾನಂದ—ಆಗಬಹುದು. (ಒಳಗೆ ಹೋಗಿ ಧೃತಿಶಾಂತಿಯರೊಡಗೂಡಿದ ಪ್ರಜ್ಞೆಯನ್ನು ಹಿಂದೆ ಕರೆದುಕೊಂಡು ಬಂದು ಸಭೆಯನ್ನು ತೋರಿಸಿ) ಮಂಗಳಾಂಗಿ! ಸುಮುಹೂರ್ತವಾಗಿರುವುದು. ಸಖಿಯರೊಡನೆ ಸಭೆಯನ್ನು ಪ್ರವೇಶಿಸಿ ಅನುರೂಪನಾದ ಪುರುಷನನ್ನು ವರಿಸು.

ಪ್ರಜ್ಞಾ—(ತಲೆಬಾಗಿ) ಪೂಜ್ಯರ ಅಪ್ಪಣೆಯಂತೆಯೇ ಆಗಲಿ,

ಶತಾನಂದ—ಕಲ್ಯಾಣಮಸ್ತು. ಎಲೈ ಧೃತಿಯೆ! ಈ ಸಭೆಯಲ್ಲಿ ನೆರೆದಿರುವ ರಾಜರ | ರಾಜಪುತ್ರರ ಸ್ವಭಾವಾದಿ ಪರಿಚಯವನ್ನು ರಾಜಪುತ್ರಿಗೆ ಉಂಟುಮಾಡು. (ತನ್ನ ಸ್ಥಾನಕ್ಕೆ ತೆರಳುವನು)

ಧೃತಿ—ಪ್ರಿಯಸಖಿ, ಹೀಗೆ ಪ್ರದಕ್ಷಿಣವಾಗಿ ಬಾ. ಇತ್ತನೋಡು,

ರಾಗ॥ ಬೇಹಾಗ್॥ ಆದಿ॥ (ಚಿತ್ರವಿಪ್ಪುದು)

ಕೇಳುಸಖೀ ಈತನು, ಮಾಯಾಪುರೀರಾಜನು ॥ ಪ ॥
ಕೂರಜನಪರಿವಾರಸಂಯುತನು । ನರರೊಳುಸುರವರಸಮುಸಂಪದನು ॥ ೧ ॥

ಪ್ರಜ್ಞೆ—(ಉದಾಸೀನದಿಂದ) ಸಾಕು, ಬಲ್ಲೆನು.

ಕಂದ॥ ಮೋಹಕೆ ಸೆಳೆಯುವ ಗುಂಪಿಗೆ ।
ಸಾಹಸಮಂ ತೋರುವನಿವನತ್ಯಧಿಕಂಕೇೂ ॥
ಲಾಹಲಮಾಡುತಬಲ್ಲಿದ ।
ಸಾಹಸಿಯಾಗಿರ್ಪನಿವನಬಲ್ಲೆ ನಡೆಸಖೀ ॥

ಧೃತಿ—(ಮೇಲಿನಮಟ್ಟು)

ರೂಪದೊಳಧಿಕಂ ಭೂಪರೊಳುಧೀರಂ । ಕಾಪಾಡುವರೊಳತಿಸಂಪನ್ನನಾಗಿಹಂ ॥ ಕೇಳುಸಖಿ ॥ ಈತನು ಕಾಮಾಖ್ಯಮಂತ್ರಿಯು ॥ ೨ ॥

ಪ್ರಜ್ಞೆ—(ಹಾಸ್ಯದಿಂದ) ಪ್ರಿಯಸಖಿ, ಸ್ತ್ರೀಪುರುಷರೆಂಬುದನ್ನು ಪರಿಭಾವಿಸದೆ ಪ್ರಪಂಚದಲ್ಲಿರುವವರೆಲ್ಲರನ್ನೂ ನರಳಿಸುವ ಈ ನಿರ್ದಯನನ್ನು ಬಲ್ಲೆನು. ಮುಂದೆನಡೆ.

ಧೃತಿ—(ಮೇಲಿನಮಟ್ಟು)

ಧನಕನಕಪೂರಿತಂ ಜನಮನಕೆ ರಂಜಕಂ । ಘನತರಮಹಿಮಗುಣಗಣಮಂನಿಂದಿಸಂ ॥ ಕೇಳುಸಖೀ, ಈತನು ಡಂಭನೆಂಬಾತನು ॥ ೩ ॥

ಪ್ರಜ್ಞೆ—(ಜಿಗುಪ್ಸೆಯಿಂದ) ಸಖಿ, ಮುಂದೆ ನಡೆ ಮಿತ್ರನ ಪತ್ನಿಯನ್ನು ಕಾಮಿಸುವವನೂ ಶಂಭುಮುಖ್ಯರನ್ನು ಕೂಡ ಜಯಿಸುವೆನೆಂಬ ಜಂಬಗಾರನೂ ಆದ ಈ ಡಂಭನನ್ನು ವರ್ಣಿಸಬೇಡ.

ಧೃತಿ—ಪ್ರಿಯಸಖೀ! ಈತನನ್ನು ನೋಡು. ಮಾಯಾಪುರೀಶನ ಮಂತ್ರಿಯೂ ಊರ್ವಶೀ ಸಮಾನ ಪತ್ನಿಯುಳ್ಳವನೂ ಆದ ಈತನೇ ಲೋಭನು.

ಪ್ರಜ್ಞೆ—ಸಖಿ, ಪತ್ನಿಯು ಪರಪುರುಷರೊಡನೆ ಸರಸವಾಡುತ್ತಿರಲು ಸಂಪನ್ನೆಯೆಂದಾಡುವ ಈ ಪ್ರಾಣಿಯನ್ನು ನೋಡಲಾರೆನು.

ಧೃತಿ—ಇವನನ್ನು ನೋಡು, ಮಾಯಾಪುರೀಶನ ಮಂತ್ರಿಗಳಲ್ಲೊಬ್ಬನಾದ ಅಹಂಕಾರನು.

ಪ್ರಜ್ಞೆ—ಉತ್ತಮರನ್ನು ಭೃತ್ಯರಂತೆ ಭಾವಿಸಿ ಸ್ತೋತ್ರಪ್ರಿಯನಾಗಿರುವ ಇವನನ್ನು ತಿಳಿಯದವರಾರು?

ಧೃತಿ—ಈತನನ್ನು ನೋಡು, ಮಾಯಾಪುರೀಶನ ಮಂತ್ರಿ, ಮಾನ್ಯರ್ ಮಹಾಪುರುಷನು.

ಪ್ರಜ್ಞಾ—ಪ್ರಿಯಸಖಿ ! ಸಾಧುಸಜ್ಜನರನ್ನು ಹಿಂಸಿಸುವವನಾದ ಈತನನ್ನು ನೋಡಲೊಲ್ಲೆನು.

ಧೃತಿ—ಪ್ರಿಯಸಖಿ, ಇತ್ತಕಡೆಯಲ್ಲಿ ನೋಡು. ಇಲ್ಲಿರುವಾತನೇ ಸಂತೋಷನು.

ಪ್ರಜ್ಞಾ—(ಸಂತೋಷದಿಂದ)

ರಾಗ॥ ಶಂಕರಾಭರಣ॥ (ನಮ್ಮಮಾವ)

ಬಲ್ಲೆನಾನು, ಜಲಜಾಕ್ಷಿಯಿವನಂ ॥ ಪ ॥ ಶಿಷ್ಟರಕಂಡರೆ ಕಷ್ಟಪಡುವರೆಂದು, ಥಟ್ಟನೆಬಂದವರ ಮುಟ್ಟಿವಂದಿಸುವಂ ॥ ಲೋಭನಹಯಿಸಿದ ಶೋಭನಪುರುಷನು ಡಂಭನನೋಸಕೆ ಸ್ತಂಭಿಪನಲ್ಲಂ ॥ ೧ ॥

ಧೃತಿ—ಈತನೇ ವಸ್ತುವಿಚಾರನು.

ಪ್ರಜ್ಞಾ—ರಾಗ॥ ಬೇಹಾಗ್॥ (ಯಾವರಾಜಾಮುಪಿಯೊಳಾಗೆ)

ಕೇಳಬಲ್ಲೆನಿವನಸಖಿಯೆ ಜಲಜಾಂಬಕಿಯು ॥ಪ॥ ಕಾಮತಾಪಕೆಮರುಗುತಿರುವ । ಕೋಮಲಜನಸಂಭ್ರಮವಂ । ಕಾಮಿನೀಚಿತ್ರದವಿವರವಂ । ಪ್ರೇಮದಿಂದತಿಳುಹಿಪೊರೆವಂ ಕೇಳೆ ॥ ೧ ॥

ಧೃತಿ—ಪ್ರಿಯಸಖಿ ಈತನನ್ನು ಕೀಳದೇ ಇರುವೆಯಷ್ಟೆ !

ಪ್ರಜ್ಞಾ—(ಕೃತಜ್ಞತೆಯಿಂದ)

॥ ಮೇಲಿನಮಟ್ಟು ॥

ಆರ್ಯರಲ್ಲಿಶ್ರೇಷ್ಠನಿವನು । ಕಾರ್ಯದಲ್ಲಿದಕ್ಷನಾನು॥ ಧೈರ್ಯಶೌರ್ಯನಿಧಿಯು ಬಾಲಸೂರ್ಯಸದೃಶತೇಜನಿವನ ॥ ಕೇಳೆ ॥ ೨ ॥

ಪ್ರಿಯಸಖಿ ! ನಮ್ಮ ಅಭ್ಯುದಯಕ್ಕೆ ಕಾರಣಭೂತರಾದ ಈ ಮೂವರು ಮಹಾತ್ಮರೂ ನನಗೆ ಪಿತೃಸಮಾನರು, ವಂದನೀಯರು, ಮತ್ತು ಚಿರಸ್ಮರಣೀಯರು.

ಧೃತಿ—(ವಿಷ್ಣುಭಕ್ತನಕಡೆಗೆ ಕೈತೋರಿಸಿ)

ಕಂದ || ಪರಿಕಿಪುದೀನವತರುಣನ |

ಸ್ಮರಕೋಟಿಸದೃಶನುನೋಜ್ಞರೂಪಾನ್ವಿತನಾ ||

ಪರಮಪದನಾಥಭಕ್ತನ |

ವರಮಧುರಾಧೀಶನಸುಗುಣಾಭರಣಾಸನಂ ||

ಪ್ರಜ್ಞೆ—(ಸಂಭ್ರಮದಿಂದ)

ರಾಗ||　　　(ಇಂದಿಗೆ ಧನ್ಯನುನಾನು)

ಕಂದರ್ಪರೂಪನಿವನಸಂದರ್ಶನದಿಂ || ಇಂದಿಗೆನಾಂಧನ್ಯಳಾದೆ || ಪ || ಕೆಟ್ಟಕ್ರೋಧಾದಿಗಳಟ್ಟುಳಿಯುಂಬಿಗಿ ಕಟ್ಟುಕೆಮನದೊಳ್ ನಿಷ್ಠೆಯೊಳಿರುತಿಹ| ದಿಟ್ಟನಕಂಡುದರಿಂ || ಇಂದಿಗೆನಾಂಧನ್ಯಳಾದೆ ||೧|| ರಾಜೀವಾಕ್ಷನಪಾದ ಪೂಜಕನನುದಿನಂ| ರಾಜಿತತನುಕಾಂತಿಯುತಂ| ಕೂಜಿತಗುಣನಂಸೇರ್ದುದರಿಂದಾಂ ||ಇಂದಿಗೆ||೨||

ಶತಾನಂದನಶಿಷ್ಯ—(ಮುಂದೆಬಂದು) ಪ್ರಜ್ಞಾಂಬೆಗೆ ಮಂಗಳವಾಗಲಿ ! ಇದೋ ಸ್ವಯಂವರಮಾಲಿಕೆ !

(ಪುಷ್ಪಮಾಲಿಕೆಯನ್ನು ಕೊಡುವನು)

ಪ್ರಜ್ಞೆ—(ಪುಷ್ಪಮಾಲಿಕೆಯನ್ನು ಕೈಯಲ್ಲಿ ಹಿಡಿದು ವಿಷ್ಣುಭಕ್ತನ ಮುಂದೆ ನಿಂತು, ಲಜ್ಜೆಯಿಂದ)

ರಾಗ॥ (ಧೀರವೀರನಕೊರಳಿಗೇ ಸುಮಹಾರ)

ಸುಲಲಿತಾಂಗನ ಕೊರಳಿಗಾಂಸುಮಮಾಲೆಹಾಕುವೆ ನೊಲವಿನಿಂ । ಜಲಜನಾಭನಪಾದಭಜಕನಕೆಲವಸಾರುತೆಸುಖಿಪೆನಾಂ ॥ಪ॥ ಪಲವುದಿನದಿಂ ತೊಳಲಿಬಳಲಿ ಹಲುಬುತಿರೆನಾಂವಿರಹದಿಂ ॥ ಸುಲಭದಿಂದೆನಗೊಲಿದುಬಂದನ ಚಲುವನಿವನಂವರಿಸುತಾಂ ॥ ಸುಲಲಿತಾಂಗನ ॥೧॥ ನಳಿನಲೋಚನಶೇಷಶೈಲನಿವಾಸನೊಲ್ಮೆಯೊಳೀದಿನಂ । ಇಳೆಯೊಳೀತಗೆ ಲಲನೆಯಾಗಲಾಂಧನ್ಯಳೆನ್ನಿಸಿಮೆರೆಯುವೆಂ ॥ ೨ ॥

ಶತಾನಂದ—ವಿಷ್ಣುಭಕ್ತನಬಳಿಗೆ ಬಂದು ಮಾಲೆಯುಹಾಕಿ ಬಳಿಕ ಆಶೀರ್ವಾದಮಂತ್ರದೊಡನೆ ಪುಷ್ಪಾಕ್ಷತೆಗಳನ್ನು ತಳಿಯುವರು.

ಶಾಂತಿ
ಧೃತಿ } (ಸಂಭ್ರಮದಿಂದ)

ರಾಗ (ನವಮಲ್ಲಿಕಾದಿಪೂಗಳಿಗೆ)

ಮಂಗಳಂಪ್ರಜ್ಞಾಂಬೆಗೇವರವಿಷ್ಣುಭಕ್ತಗೆ। ಜಯಮಂಗಳಂ ಜಗದಾದಿದೇವಗೆ ದೀನಪಾಲಗೆ ॥ ಪ ॥ ರಾಜಿತೆಯಾಗಿ ಸುಗುಣಭರಿತರಾಜಸಿಂಗೂಡಿ। ತೇಜದಿಂದ ಮೆರೆಯುತಿರುವೀ ರಾಜೀವನೇತ್ರೆಗೆ ॥ಮಂಗಳಂ॥ ೧ ॥ ಜಿಷ್ಣುಗಳಲಿವರ್ಧಿಷ್ಣುವಾಗಿ ಶೇಷ್ಠನೆನಿಸಿದ ಕೃಷ್ಣನನ್ನು ಪೋಲ್ವ ಶ್ರೀ ವಿಷ್ಣುಭಕ್ತಗೆ ॥ ಮಂಗಳಂ ॥ ೨ ॥

(ಆರತಿಯೆತ್ತುವರು.)

ವಿವೇಕ—(ಎದ್ದುನಿಂತು ವಿನಯದಿಂದ) ಮಂಟಪವನ್ನಲಂಕರಿಸಿರುವ ಮಹಾಮೋಹರೇ ಮೊದಲಾದ ಬಂಧುಮಿತ್ರರಾಜರೇ!ಅವಧರಿಸಬೇಕು. ನೀವು ಮಾಡಿದ ಸಾಹಸವು ಈ ಮಹೋತ್ಸವಕ್ಕೆ ಅನುಕೂಲವೇ ಆದುದರಿಂದ ನೀವೆಲ್ಲರೂ ಸನ್ಮಿತ್ರರೇ ಆದಿರಿ. ಪ್ರಕೃತದಲ್ಲಿ ಎಲ್ಲರೂ ಏಕೀಭವಿಸಿ ಸಂತೋಷದಿಂದ

ಮಂಗಳಕಾರ್ಯವನ್ನು ನೆರವೇರಿಸಿ ಸನ್ಮಾನಿತರಾಗಬೇಕೆಂದು ಪ್ರಾರ್ಥಿಸುವೆನು.

ಮೋಹ:—ಎಲೈ ಸಾರ್ವಭೌಮನಾದ ವಿವೇಕ ಮಹಾರಾಜನೆ! ಪ್ರಥಮತಃ ನಾವು ನಿನಗೆ ಪ್ರತಿಪಕ್ಷದವರಾಗಿದ್ದುದು ನಿಜ; ಆದರೆ, ಈ ಸಭಾ ಪ್ರವೇಶವಾದಾಗಲೇ,—ನಿನ್ನ ಸಂದರ್ಶನವಾದಾಗಲೇ,—ನಮ್ಮ ವಿರೋಧಭಾವವು ತಿರೋಧಾನಹೊಂದಿ ನಿನಗೆ ವಿಧೇಯರಾಗುವಂತಹ ಅನಿರ್ವಚನೀಯವಾದ ದೈವೀ ಭಾವವೊಂದು ನಮಗುಂಟಾಯಿತು. ಆದುದರಿಂದ ನಾವೆಲ್ಲರೂ ಸ್ವಸಂತೋಷದಿಂದಲೇ ನಿನ್ನ ಮಾಂಡಲಿಕತ್ವವನ್ನು ಸಮ್ಮತಿಸುವೆವಲ್ಲದೆ ನಿನ್ನ ಆಜ್ಞಾನುಸಾರವಾಗಿ ಮಂಗಳಕಾರ್ಯದಲ್ಲಿ ನಿನಗೆ ಸಹಾಯಕರಾಗಿಯೇ ಇರುವೆವು.

(ಎಲ್ಲರೂ ಎದ್ದುನಿಲ್ಲುವರು)

ಶತಾನಂದ—ಎಲೈ, ವಿಷ್ಣುಭಕ್ತರಾಜನೆ ಪ್ರಜ್ಞಾಂಬೆಯ ಪಾಣಿಗ್ರಹಣಮಾಡು.

ವಿಷ್ಣು—ಅಪ್ಪಣೆ (ಪ್ರಜ್ಞೆಯ ಕೈಹಿಡಿಯುವನು.)

ಎಲ್ಲರೂ ಒಟ್ಟಾಗಿ ಪುಷ್ಪಾಂಜಲಿಬದ್ಧರಾಗಿ ಮಂಗಳವನ್ನು ಹೇಳುವರು.

ರಾಗ|| ಸುರಟಿ|| ರೂಪಕ|| (ಶ್ರೀಪುರೀಶ)

ಮಂಗಳಂ ಸರೋಜನೇತ್ರ ಭವತುತೇ ಸದಾ || ರಂಗಕ್ಷ್ಮಾಂತ ರಂಗಮಂಗಳಾಂಗ ಶ್ರೀರಂಗ || ಪ || ಶರದಿಂದುಕೋಟಿ ಸುಂದರಾನನ ಶರಣರಕ್ಷಣ | ಕರುಣದಿಂ ನವದಂಪತಿಗಳಂಪೊರೆವುದೈ ಸದಾ || ೧ || ತರುಣಾರ್ಕಕೋಟಿ ಸದೃಶಚರಣಯುಗಳ ಭಾಸುರ | ವರಶೇಷಶೈಲ ಶಿಖರನಿಲಯ ಶ್ರೀರಮಾವರ || ಪ || ೨ ||

ಪುಷ್ಪಾಂಜಲಿಯನ್ನು ಒಪ್ಪಿಸುವರು.

ಪಂಚಮಾಂಕಕ್ಕೆ ಮಂಗಳಂ



(ಸೂತ್ರಧಾರನ ಪ್ರವೇಶ)

ಸೂತ್ರ—(ಕೈಜೋಡಿಸಿ) ರಸಿಕಸಭಾಸದರಲ್ಲಿ ವಿಜ್ಞಾಪನೆ!

ಗುಣಜ್ಞರೇ! ಈ ನಾಟಕವು ಕೇವಲ ಪ್ರೇಕ್ಷಣಕ್ಕೆ ಎಂದರೆ, ನೋಟಕ್ಕೆ ಮಾತ್ರವೆಂದು ತಿಳಿಯಬಾರದು. ಮನಸ್ಸಿನಲ್ಲಿ ಗ್ರಹಿಸಿ ಮನನಮಾಡುವುದಕ್ಕೂ ಅರ್ಹವಾದುದು. ಹೇಗೆಂದರೆ:—

ಪ್ರಾಣಿಯು ಜನಿಸುವಾಗಲೇ ಪ್ರಜ್ಞೆ ಸಹಜವಾಗಿರುವುದು. ಈ ಪ್ರಜ್ಞೆಗೆ ಉತ್ಪತ್ತಿಸ್ಥಾನವು ವಿವೇಕ ಮತ್ತು ಸೌಶೀಲ್ಯವೆಂಬುದು ಜಗದ್ವಿದಿತ ವಿಷಯವೇ ಆಗಿರುವುದು. ಪ್ರಾರಂಭದಲ್ಲಿಯೇ ಕ್ಷುತ್ಪರಿಹಾರಕವಾದ ಆಹಾರದ ವಿಷಯದಲ್ಲುಂಟಾಗುವ ಅಪೇಕ್ಷೆಯೇ ಕಾಮವು. ಅದು ಲಭಿಸಿದಾಗ ಸೇವಿಸ ಬೇಕೆಂದು ಕೋರುವ ಆಸಕ್ತಿಯೇ ರತಿಯೆನಿಸುವುದು.

ಈ ಲಂಪಟದಲ್ಲಿ ವಿದ್ಯಾಭ್ಯಾಸಕ್ಕೆ ಮಾತ್ರವೇ ವಿವೇಕವು ತಲೆದೋರುವುದು; ಆದರೂ ಡಂಭ, ಅಹಂಕಾರ, ತೃಷ್ಣಾ, ಲೋಭ, ಮಾತ್ಸರ್ಯ ಇದರ ಸಹವಾಸವು ಕ್ರಮವಾಗಿ ಉಂಟಾಗುವುವು. ಎಂದರೆ, ನಾನಾವಿಧವಾದ ವಸ್ತುಗಳಲ್ಲಿ ಆಗುವ ಅಪೇಕ್ಷೆಯೇ ಕಾಮವು. ಅದನ್ನು ಅನುಭವಿಸುವುದರಲ್ಲಿ ತನಗೆ ಸಮಾನರಿಲ್ಲವೆಂಬುದೇ ಡಂಭ, ತನಗೆ ಮಿರಿದವರಿಲ್ಲವೆಂಬುದೇ ಅಹಂಕಾರ, ಮಾಡಬಾರದುದೆಂಬ ಜಿಪುಣತನವೇ ಲೋಭವು, ಸಮೃದ್ಧಿಯುಳ್ಳವರಿಗೆ ಕೇಡಾಗಬೇಕೆಂಬ ದುರ್ಬುದ್ಧಿಯೇ ಮಾತ್ಸರ್ಯವು. ಹೀಗೆ ಪರಿಣಮಿಸುವುವು.

ಇವು ಸ್ವಲ್ಪಕಾಲ ಕಳೆದಮೇಲೆ, ವಿಷಯಾಸಕ್ತಿಯೇ! ಕಾಮವು! ಅದರ ಲಭ್ಯದಲ್ಲಿ ಪ್ರತಿಬಂಧತೋರಿದರೆ ಯಾವನ್ನಾದರೂ ತಿರಸ್ಕರಿಸಬೇಕೆಂಬುದೇ ಕ್ರೋಧವು. ಅಂತಹ ಕಾಲದಲ್ಲಿ ಪ್ರಜ್ಞೆಯು ಪ್ರಚ್ಛನ್ನವೇಷದಲ್ಲಿ ಅಡಗುವುದು ಆ ಸ್ಥಾನದಲ್ಲಿ ತೃಷ್ಣೆಯೇ ನಿಲ್ಲುವುದು.

ಪ್ರಚಂಡವಾದ ಈ ಪ್ರವಾಹದಲ್ಲಿ ಮುಳುಗಿ ತೇಲುತ್ತಿರುವಾಗ ದೈವಯೋಗದಿಂದ ಶಾಂತತೆ ತಲೆದೋರಿದರೆ ಆಗ ಡಂಭಕ್ರೋಧರಿಗೆ ಸ್ವಲ್ಪ ಭಯವುಂಟಾಗುವುದು. ಅಂತಹ ಭಯಕ್ಕೆ ವಿಷ್ಣುಭಕ್ತಿಯೇ ವಿಷಯವಾಗುವುದು.

ಈ ಸಮಯದಲ್ಲಿ ಪ್ರಜ್ಞೆಯು ಹೊರಹೊರಡಬೇಕಾಗುವುದು. ಆ ಕಾಲದಲ್ಲಿ ಸೌಶೀಲ್ಯವಿವೇಕ ಇವರ ಆಜ್ಞೆಯಂತೆ ಶಾಂತ, ಸಂತೋಷ, ವಸ್ತುವಿಚಾರ, ಇವರು ಪ್ರಜ್ಞಾಸಹಚಾರಿಗಳಾದ ಶಾಂತಿಧೃತಿಗಳು ತಲೆದೋರುವುವು. ಇವುಗಳಿಂದ ಕಾಮಾದಿಗಳು ತಿರಸ್ಕೃತವಾಗಿ ಕುಗ್ಗಿ ತಮಗೆ ನಿರೂಪಕವಾದ ಮೋಹವನ್ನು ಸೇರುವುವು. ಹೀಗಾಗುವುದಕ್ಕೆ ಪ್ರಜ್ಞಾಬಹಿರ್ವರ್ತಿತ್ವವೇ ಕಾರಣವಾಗಿರುವುದು.

ಆದರೂ ಮೋಹಸಹಾಯಕರಾದ ಡಂಭಾದಿಗಳು ಅಂತಹ ಪ್ರಜ್ಞೆಯನ್ನು ಅಪಹರಿಸುವುದಕ್ಕೂ ಯತ್ನಿಸುವುವು. ಅದನ್ನೇ ಮಿಥ್ಯಾದೃಷ್ಟಿಯೆಂದು ಶಾಸ್ತ್ರಜ್ಞರು ಹೇಳುವರು. ಆದರೆ ಅದು ಬಹಿರ್ವರ್ತಿಯಾಗುವುದಿಲ್ಲ.

ಆ ಬಳಿಕ ಪ್ರಜ್ಞಾಪಕಾರಕ್ಕಾಗಿ ಮೋಹಾದಿಗಳು ಪ್ರಜ್ಞೆಯ ಸ್ವಯಂವರಕ್ಕಾಗಿ ವಿವೇಕ, ಶಾಂತ, ಸಂತೋಷ, ವಸ್ತು ವಿಚಾರ, ಶಾಂತಿ, ಧೃತಿಗಳು ಏಕತ್ರ ಸೇರುವುವು. ಆಗ ಪ್ರಜ್ಞೆಯು ಧೃತಿಯನ್ನು ಆಶ್ರಯಿಸಿ ಮೋಹಾದಿಗಳ ದೋಷಗಳನ್ನೂ ಶಾಂತಾದಿಗಳ ಸಾಧುತ್ವವನ್ನೂ ಪ್ರಕಾಶಪಡಿಸಿ ತನಗೆ ಪ್ರಾಪ್ಯವಸ್ತುವಾದ ವಿಷ್ಣುಭಕ್ತಿಯನ್ನು ಸೇರುವುದು. ಪ್ರಜ್ಞೆಗೆ ವಿಷ್ಣುಭಕ್ತಿ ಹೊರತು ಮತ್ತಾವುದೂ ಪ್ರಾಪ್ಯವಲ್ಲ. ಅನ್ಯತ್ರವರ್ತಿಸಿದರೂ ಫಲಪ್ರದವಾಗಲಾರದು

ವಿಷ್ಣುಭಕ್ತಿಯು ಯೋಗ್ಯವೆಂದು ಪ್ರಜ್ಞೆಯಿಂದ ವರಿಸಲ್ಪಟ್ಟಕೂಡಲೆ ವಿವೇಕವು ಅಭ್ಯುದಯವನ್ನು ಹೊಂದುವುದು. ಆಗ ವಿವೇಕದ ಪ್ರಾಬಲ್ಯದಿಂದ ಮೋಹಾದಿಗಳೂ ದುಸ್ಸ್ವಭಾವವನ್ನು ಬಿಟ್ಟು ಸತ್ಸ್ವಭಾವಹೊಂದಿ ವಿವೇಕಕ್ಕೆ ಸಹಕಾರಿಗಳಾಗುವುವು. ಆಗ ಅವುಗಳ ಕ್ರಮವೇ ಬೇರೆಯಾಗುವುವು. ಹೇಗೆಂದರೆ:—

(೧) ದೇಹ—ದೇಹಸಂಬಂಧವಾದ ಸ್ತ್ರೀಪುತ್ರಸಂಪದಗಳಲ್ಲಿ ನೆಲಸಿದ್ದ ಮೋಹವು ಅದನ್ನು ಬಿಟ್ಟು, ಕಮಲಾಕ್ಷನೂ ಅವ್ಯಯನೂ, ಜಗತ್ಕರ್ತನೂ, ಅಪ್ರಮೇಯನೂ ಆಗಿರುವ ಪರಮಾತ್ಮನಲ್ಲಿ ನೆಲಸುರುವುದು.

(೨) ಸ್ರಕ್, ಚಂದನ ವನಿತಾದಿಗಳಲ್ಲಿದ್ದ ಕಾಮವು ಅವನ್ನು ಬಿಟ್ಟು ಮನಸ್ಸಿನಿಂದ ಕೂಡ ಹೊಂದುವುದಕ್ಕೆ ಅಸಾಧ್ಯವಾದ, ಅತ್ಯುತ್ತಮವಾದ,

ನಿತ್ಯಾನಂದಪದವಾದ, ಪರಮಪದವನ್ನು ಹೊಂದುವುದರಲ್ಲಿ ತತ್ಪರವಾಗುವುದು.

(೩) ಭೋಗ್ಯವಸ್ತು ಪ್ರಾಪ್ತಿಪ್ರತಿಬಂಧಕದಲ್ಲಿದ್ದ ಕ್ರೋಧವು ಪರಮಪದ ಪ್ರಾಪ್ತಿ ವಿರೋಧಿಗಳನ್ನು ತಿರಸ್ಕರಿಸಿ ಶಿಕ್ಷಿಸುವುದರಲ್ಲಿ ನೆಲೆಸುವುದು.

(೪) ಸ್ತ್ರೀಪುತ್ರ ಭೃತ್ಯಾದಿಗಳನ್ನು ವಶಪಡಿಸಿಕೊಳ್ಳುವುದರಲ್ಲಿ ನೆಲೆಸಿದ್ದ ಡಂಭವು ಪರಮಾತ್ಮನಿಗೆ ಕಿಂಕರನಾಗಿ ಒಲಿಸಿಕೊಳ್ಳುವುದರಲ್ಲಿ ನೆಲೆಸುವುದು.

(೫) ಭೋಗ್ಯವಸ್ತುಪ್ರಾಪ್ತ್ಯದಲ್ಲಿದ್ದ ತೃಷ್ಣೆಯು ಪರಮಾತ್ಮನ ನಾಮಾಮೃತಪಾನದಲ್ಲಿ ನೆಲೆಸುವುದು.

(೬) ಪ್ರಾಪ್ತವಾದ ಸಂಪದ್ವ್ಯಯದಲ್ಲಿ ನೆಲಸಿದ್ದ ಲೋಭವು, ಸಾಹಸದಿಂದಲೂ ಪ್ರಜ್ಞೆಯಿಂದಲೂ ಸಾಧಿಸಿದ ಭಗವತ್ಕೃಪಾವ್ಯಯದಲ್ಲಿ ನೆಲೆಸುವುದು.

(೭) ವರ್ಧಿಷ್ಣುಗಳಾದ ಮಹನೀಯರ ಏಳಿಗೆಯನ್ನು ಸಹಿಸಲಾರದಿದ್ದ ಮಾತ್ಸರ್ಯವು, ಭಗವತ್ಪ್ರಾಪ್ತಿಗೆ ವಿರೋಧಿಗಳಾಗಿ ಪ್ರಬಲಿಸಿದ್ದ ಪತ್ನೀಪುತ್ರಾದಿ ಪರಿವಾರಗಳ ಏಳಿಗೆಯಲ್ಲಿ ನೆಲಸುವುದು.

ಈರೀತಿ ಪ್ರವೃತ್ತಿಮಾರ್ಗ ಸಂಬಂಧಗಳಾದ ಮೋಹಾದಿಗಳ ಗುಣವು ವ್ಯತ್ಯಸ್ತವನ್ನು ಪಡೆದರೆ ನಿವೃತ್ತಿಮಾರ್ಗ ಸಂಬಂಧಗಳಾದ ಶಾಂತಿ, ಧೃತಿ, ಸಂತೋಷ, ವಸ್ತುವಿಚಾರಗಳಲ್ಲಿ ಏಕೀಭಾವವಾಗುವುದು. ಆಗಲೇ ಪ್ರಜ್ಞಾವಂತರಾಗಿ ವಿಷ್ಣುಭಕ್ತಿಯುಳ್ಳವರಾಗುವರು. ಇದೇ ಕರ್ಮಭೂಮಿಯಲ್ಲಿ ದೇಹಧಾರಣೆಗೆ ಪ್ರಯೋಜನವೆಂದು ಎಲ್ಲರೂ ತಿಳಿಯಬೇಕೆಂಬುದೇ ಕೃತಿಬಂಧಕರ ಮುಖ್ಯೋದ್ದೇಶವಾಗಿರುವುದು.

ಸರ್ವಜ್ಞರಾದ ಸಭಾಸದರು ನಾಟ್ಯವರ್ಗದವರಲ್ಲಿ ರಾಗ, ತಾಳ, ಲಯ, ವೇಷ, ಭಾಷೆ ಮೊದಲಾದುವುಗಳಲ್ಲಿ ತೋರಿರಬಹುದಾದ ನ್ಯೂನಾತಿರೇಕಗಳನ್ನು ಮನ್ನಿಸಬೇಕೆಂದು ಪ್ರಾರ್ಥಿಸುವೆನು.

ಸಮಸ್ತ ಸನ್ಮಂಗಳಾನಿಭವಂತು.



# ಕರ್ಣಾಟಕನಂದಿನಿ.

—o—

ಮತ, ನೀತಿ, ವಿದ್ಯಾ—ವಿಷಯಗಳನ್ನೊಳಕೊಂಡು ಸ್ತ್ರೀಯರ ಗೃಹಶಿಕ್ಷಣ, ಮನಶ್ಶಿಕ್ಷಣಗಳ ಕ್ರಮವನ್ನು ಪ್ರತಿಪಾದಿಸುವ, ಸ್ತ್ರೀಯರ ಸೌಜನ್ಯಾಭಿವೃದ್ಧಿಗಾಗಿ ಸ್ತ್ರೀಕರ್ತೃತ್ವದಿಂದ ಪ್ರಕಟವಾಗುತ್ತಿರುವ, ಉತ್ತಮತರದ

**ಕನ್ನಡನುಡಿಯ ಮಾಸಪತ್ರಿಕೆ.**

ಕ್ರೌನ್ ನಾಲ್ಕರ ಆಕಾರದ ೩೨ ಪುಟಗಳಿಂದ ಸಚಿತ್ರವಾಗಿ ಕಾಲಕ್ಕೆ ತಪ್ಪದೆ ಆರ್ಯಮಹಿಳೆಯರ ಪಾರಾಯಣಕ್ಕೆ ಅನುಕೂಲವಾಗಿಯೂ, ಬಾಲ-ಬಾಲೆಯರ ಚಿತ್ತವಿಕಾಸಕ್ಕೆ ಸಹಕಾರಿಯಾಗಿಯೂ, ಉತ್ತಮಸ್ತುತಿ ಗೀತಾಪ್ರಬಂಧಗಳನ್ನು ಕಾಲಕ್ಕೆ ತಕ್ಕಂತೆ ಪ್ರಕಾಶಪಡಿಸುತ್ತಿರುವುದು. ದ್ವಿತೀಯವರ್ಷದ ಪ್ರಥಮ ಕಾಣಿಕೆಯಾಗಿ, ದ್ರೌಪದೀ ವಸ್ತ್ರಾಪಹರಣವೆಂಬ ಪುಸ್ತಕವು ಲಭಿಸುವುದು.

ವಾರ್ಷಿಕ ಚಂದಾ ೨-೪-೦ ಹಾಸಲು ವಿ. ಪಿ. ಖರ್ಚು ೦-೫-೦

(ಪ್ರಥಮ ಸಂಪುಟ)

ಕರ್ಣಾಟಕ ನಂದಿನಿಯ ಪ್ರಥಮ ಸಂಪುಟದ ಸ್ವಲ್ಪ ಪ್ರತಿಗಳು ಮಾತ್ರವೇ ಬೈಂಡಾಗಿ ವಿಕ್ರಯಕ್ಕೆ ಸಿದ್ಧವಾಗಿರುವುವು. ೫೬೧ ಪುಟಗಳನ್ನೂ, ೧೮ ಭಾವಚಿತ್ರಗಳನ್ನೂ ಒಳಕೊಂಡಿರುವ ಈ ಸಂಪುಟದಲ್ಲಿ ಕರ್ಣಾಟಕ ದೇಶಭಕ್ತರ-ಭಾಷಾಸೇವಕರ ಮತ್ತು ಭಾರತೀಯ ಸುಪ್ರಸಿದ್ಧಪುರುಷರ, ಮಹಿಳಾಮಣಿಯರ ಜೀವನ ಚರಿತ್ರೆಗಳೂ ಸ್ತ್ರೀಯರಿಗೆ ಅತ್ಯುಪಯುಕ್ತವಾದ ಉಪನ್ಯಾಸಗಳೂ ಸ್ಫೂರ್ತಿದಾಯಕವಾದ ಸಣ್ಣ ಸಣ್ಣ ಲೇಖನಗಳೂ ಅನೇಕ ದೇವರ ನಾಮಗಳೂ ಪ್ರಕಟವಾಗಿರುವುವು ಮತ್ತು ಸುಮುಖೀವಿಜಯವೆಂಬ ಹರಿಭಜನ ಗ್ರಂಥವು ಬಹುಮಾನಪುಸ್ತಕವಾಗಿ ಲಭಿಸುವುದು. ಬೈಂಡಾದ ಸಂಪುಟ (೧೨ ಸಂಚಿಕೆಗಳ ಪುಸ್ತಕ) ೧ಕ್ಕೆ ಹಾಸಲು ಸೇರಿ ೨-೨-೦ ಮಾತ್ರ. ಬೈಂಡಾಗದೆ ಸಂಚಿಕೆಗಳನ್ನು ತರಿಸಿಕೊಳ್ಳುವವರಿಗೆ ೧೨ ಸಂಚಿಕೆಗಳಿಗೆ ಹಾಸಲು ಸೇರಿ ೧-೧೨-೦ ಮಾತ್ರ. ಬೇಕಾದವರು ಜಾಗ್ರತೆಯಾಗಿ ಬರೆದು ತರಿಸಿಕೊಳ್ಳಬಹುದು.

ವಿಳಾಸ— ಕಾರ್ಯದರ್ಶಿ,

"ನಂದಿನಿ" ಮಾತೃಮಂದಿರಂ,

ನಂಜನಗೂಡು, (ಮೈಸೂರು ಡಿ||)

## ಸನ್ಮಾನಗ್ರಂಥಾವಳಿ

---

ಭಗವದನುಗ್ರಹ, ಮಾತೃವಾತ್ಸಲ್ಯ, ... ಪೋಷಣ
ಗಳ ಒಲದಿಂದ ಸತೀಹಿತೈಷಿಣೀ ಗ್ರಂಥಮಾಲೆಯಲ್ಲಿ ಸನ್ಮಾನಗ್ರಂ...
ಹೆಸರಿನ ಮತ್ತೊಂದು ಪುಸ್ತಕಾವಳಿಯು ಇದೇ ಆಶ್ವಯುಜದಿಂದ...
ವುದು. ಈ ಗ್ರಂಥಾವಳಿಯು ವಾಙ್ಮಯಾಭಿವೃದ್ಧಿಗೂ, ಜನಮ...
ಯಥೋಚಿತ ಸಹಕರಿಸುವಂತಹ ನಾಟಕಗಳು ವರ್ಷಕ್ಕೆ ನಾಲ್ಕು...
ಯಾಗಿ ಸತೀಹಿತೈಷಿಣೀ ಚಂದಾದಾರರಿಗೆಲ್ಲಾ ಸುಲಭಕ್ರಯಕ್ಕೆ...
ಪ್ರತಿ ಮಾಸಾಂತ್ಯದಲ್ಲಿಯೂ ಒಂದು ಯಕ್ಷಗಾನ ಪ್ರಬಂಧ...
ವುದು. ಭಾಷಾಭಿಮಾನಿಗಳು ಪ್ರೋತ್ಸಾಹಿಸಬಹುದು.

ಮುಂದಿನ ಸಿದ್ಧಾರ್ಥಿ ಸಂವತ್ಸರದಲ್ಲಿ "ವಿವೇಕೋದಯ...
ನಾಟಕವೂ, ಆಷಾಢದಲ್ಲಿ ಭಾಮಾಕಲ್ಯಾಣ ಅಥವಾ ಶ್ಯಮ...
ಖ್ಯಾನವೆಂಬ ನಾಟಕವೂ ಪ್ರಸಿದ್ಧವಾಗುವವು.

ಕಾರ್ಯದರ್ಶಿ

ಹಿತೈಷಿಣೀ ಮಾತೃಮ...

ಶ್ರೀಃ.

### ಮಾತೃದೇವೋಭವ.

### ಮಾತೃಮಂದಿರಂ ವಿದ್ಯಾರ್ಥಿಗಳ ಸಂ...

ನಂಜನಗೂಡು.

ನಮ್ಮ ಸಂಘದ ವಿದ್ಯಾರ್ಥಿಗಳ ಉತ್ಕರ್ಷತೆಗಾಗಿ...
ವರ್ಷದ ಎಂದರೆ ಸಿದ್ಧಾರ್ಥಿ ಸಂವತ್ಸರದಲ್ಲಿಯೇ

### ಸನ್ಮಾರ್ಗದರ್ಶಿ.

ಎಂಬ ಹೆಸರಿನಲ್ಲಿ ಸಚಿತ್ರವಾದ "ಪಕ್ಷಪತ್ರಿಕೆ" ಹೊರ...
ಅಷ್ಟಪತ್ರದ ಆಕಾರ, ೧೬ ಪುಟಗಳಂತೆ ಪ್ರಕಟವಾಗುವುದು...
ಈಗಲೇ ತಮ್ಮ ಹೆಸರನ್ನು ಬರೆದು ಕಳುಹಿಸಿ ರಿಜಿಸ್ಟರು ಮಾಡಿಸಿಕೊ...

ವಾರ್ಷಿಕಚಂದಾ ೧-೦-೦, ಹಾಸ... ...ರೆ.

ಶ್ರೀ ಶಂಕರ ಕರ್ನಾಟಕ ಪುಸ್ತಕ ಭಾಂಡಾರ.
ಪ್ರಕಾಶಕರೂ, ಪುಸ್ತಕ ವ್ಯಾಪಾರಿಗಳು.
ಮಾಳಮಡ್ಡಿ ಧಾರವಾಡ

